

# ಸಪ್ತಗಿರಿ

ಬೆಲೆ: ರೂ ೧

ಜೂನ್ 1986



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ವೆಂಕಟೇಶ ದಯಮಾಡೊ ವೇದ ವೇದ್ಯನೆ
ಪಂಕಜಾಕ್ಷ ಅಭಯವಿತ್ತು ರಕ್ಷಿಸೆನ್ನ ಬೇಗನೆ ॥ ಪ ॥

ಚಿತ್ತ ಚಂಚಲವ ಬಿಡಿಸೊ ಮತ್ತೆ ಕ್ರೋಧವ ಓಡಿಸೊ
ಭ್ರಾಂತಿ ವಿಷಯಂಗಳು ಬೇಡ ಕಂತುಪಿತ ನಾರಾಯಣ ॥ ೧ ॥

ಸೃಷ್ಟಿ ಮೂರರೊಳಗೆ ನೀನೆ ಕಷ್ಟ ಬಿಡಿಸುವರೇನೊ
ನಷ್ಟ ತನ್ನ ನೋಡಬೇಡೊ ದೃಷ್ಟಿಸಿ ನೋಡೊ ದಯಾಳೊ

ಭಾಳ ಅಪರಾಧಿ ನಾನು ನಿನ್ನ ಬಳಿಗೆ ಬಂದೆ ನಾನು
ಒಲಿದು ಎನ್ನ ರಕ್ಷಿಸಯ್ಯ ಮೇಲುಗಿರಿ ಪುರಂದರ ವಿಠಲ

**—ಪುರಂದರದಾಸರು**



ಸಂಪುಟ ೧೬]  ಜೂನ್ ೧೯೮೬  [ಸಂಚಿಕೆ ೧

# ವಿಷಯಸೂಚಿ



ಮುಖಚಿತ್ರ : ಅನ್ನಮಾಚಾರ್ಯರ ಕೀರ್ತನೆಗಳಿರಡಕ್ಕೆ ಶ್ರೀ ಬಾಪು ಅವರ ರೂಪಕಲ್ಪನೆ.

ಒಳಗಡೆ : ಸಂಗೀತೋತ್ಸವದ ಉದ್ಘಾಟನೆ – ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರಿಂದ. ಸಂಗೀತೋತ್ಸವದ ಸಂಗೀತ ಸಭೆಗಳು.


ಗೌರವ ಸಂಪಾದಕರು :
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

# ಸಂಪಾದಕೀಯ

ಜಗತ್ತಿನ ಎಲ್ಲ ಸಾಹಿತ್ಯಕ್ಕೂ ಧರ್ಮವೇ ಮೂಲವೆಂದು ಎಲ್ಲರೂ ಹೇಳುತ್ತಾರೆ ಸಂಗೀತವೂ ಒಂದು ರೀತಿಯಲ್ಲಿ ಸಾಹಿತ್ಯ ಆಗಿರುವುದೂ ಸ್ಪಷ್ಟವೇ. ಮಾತ್ರ ಸಂಗೀತ ಶಿಶು ಪಶುಗಳಿಗೂ ಪ್ರಿಯವಾಗಿ ಭಾಷೆಯ ಬಂಧನವನ್ನು ಕಳಚಿಕೊಂಡು ವಿಶ್ವಮಾನವತಾಧರ್ಮದತ್ತ ನಡೆಸುವ ಪ್ರಥಮ ಸೋಪಾನವೆಂದರೂ ಸರಿಯಾಗುತ್ತದೆ.

ಸನಾತನ ಧರ್ಮ, ಸಂಸ್ಕೃತಿಗಳಲ್ಲಿ ಸಂಗೀತಕ್ಕೆ ಹೆಚ್ಚಿನ ಸ್ಥಾನ, ಋಗ್ವೇದದ ಹಿಂದೆಯೇ ಸಾಮವೇದ ಬರುತ್ತದೆ. ಭಾವ ಉಂಟಾದಾಗ ಅದು ನಾದವಾಗಿ ಲಯಬದ್ಧವಾಗಿ ಹೊರಡಬೇಕು. ಅಥವಾ ಎರಡೂ ಒಟ್ಟೊಟ್ಟಿಗೆ ಮುಂದುವರಿಯಬೇಕು. ಎಂತಲೇ ಸಂಗೀತದಿಂದಾಗಿ ಸಂಸ್ಕೃತಿಯೂ ಒಂದಾಗಿ ಮುನ್ನಡೆಯುತ್ತ ಬಂದಿತೆನ್ನಬಹುದು.

ಭಾರತೀಯರ ಮೂಲಭೂತ ಸಾಂಸ್ಕೃತಿಕ ಏಕತೆಯಲ್ಲಿ ಸಂಗೀತಕ್ಕೆ ಅಗ್ರಸ್ಥಾನ. ಅಲ್ಲಿ ಭಕ್ತಿ ಪಂಥದ ಸಾಧನೆ ಅಪೂರ್ವ. ಜಯದೇವ, ರಮಾನಂದ, ನರಸೀಮೆಹತಾ, ತುಕಾರಾಮ, ರಾಮದಾಸ, ಪುರಂದರ, ಸ್ವಾತಿ ತಿರುನಾಳ್, ತ್ಯಾಗರಾಜ, ಅನ್ನಮಾಚಾರ್ಯರೇ ಮೊದಲಾದ ಭಕ್ತ ಕವಿಸಂತರ ವೈಯುಕ್ತಿಕ ಜೀವನಗಳು ಯಾವ ಯಾವ ದಿಕ್ಕಿನಲ್ಲಿ ಹರಿದರೂ, ಅವರೆಲ್ಲರ ಗುರಿಯೊಂದೇ. ಎಲ್ಲ ಮಾರ್ಗಗಳೂ ಭಗವಂತನ ಕಡೆಗೇ ಹೋಗುವ ಅವರ ದಾರಿಯಲ್ಲಿದ್ದ ಊರು, ನಗರ, ಗ್ರಾಮಗಳನ್ನೂ ತಮ್ಮೊಡನೆ ಕರೆದೊಯ್ಯುವ ಹಂಬಲ ಅವರದು. ಎಂತಲೇ 'ಕಲ್ಲಸಕ್ಕರೆ ಕೊಳ್ಳಿರೊ' ಎನ್ನುತ ರಾಮನಾಮದ ಸವಿಯನ್ನು ಹಂಚಿದರು. ಅಷ್ಟೇ ಅಲ್ಲ, ಸಮಭಾವದ, ಚಿತ್ತಶುದ್ಧಿಯ, ಸಹಾನುಭೂತಿಯ ಸಾಮಾಜಿಕ ಮೌಲ್ಯಗಳನ್ನೂ ಬಿತ್ತಿ ಬೆಳೆಸಿದರು. ಇದಕ್ಕೆ ಕಾರಣ ಅವರುಗಳಲ್ಲಿನ ಭವಸಾಗರದಲ್ಲಿ ಇರುವ, ಇದ್ದು ಜೈಸುವ, ಮನೋಭಾವವೇ ಎನ್ನಬಹುದು. ಭಕ್ತಿಯ ಭರದಲ್ಲಿ, ಭವದ ಸಮರಸವನ್ನೂ ಸವಿಯಬೇಕು ಸಮಾಧಾನ ಚಿತ್ತರಾಗಿ– ಎಂಬುದೇ ಅವರುಗಳ ಆಶಯವೆಂದರೂ ಆಗುತ್ತದೆ.

ಈ ಸಮಚಿತ್ತದ ಸಾಮಾಜಿಕ ಸ್ವರೂಪವೇ ಸಾಂಸ್ಕೃತಿಕ, ಭಾವಾನಾತ್ಮಕ, ಏಕತೆಗೆ, ತನ್ಮೂಲಕ ಸರ್ವತೋಮುಖ ಅಭಿವೃದ್ಧಿಗೆ, ಮೊದಲ ಮೆಟ್ಟಿಲು. ಇಂತಲ್ಲಿ ಸಮಕಾಲೀನ ಭಾರತದ ಹಲವಾರು ಪ್ರಶ್ನೆಗಳಿಗೆ ಭಾವೈಕವೆಂಬುದು ಪರಿಹಾರವಾಗಬಲ್ಲುದು; ಎಂಬುದನ್ನು ಹರಡಲೆಂದೇ ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವ.

ಅನ್ನಮಾಚಾರ್ಯರದ್ದು ಭವಬಂಧನಹರ ಮಾರ್ಗ. ಶ್ರೀ ವೆಂಕಟೇಶ್ವರಸ್ವಾಮಿಯ ಭಕ್ತಿಯಲ್ಲಿ ಮಿಂದು ಸಂಸಾರವನ್ನು ಸುಗಮಗೊಳಿಸಿಕೊಳ್ಳುವ ಮಾರ್ಗ. ಅದನ್ನು ನೆನೆದು, ಅವರ ಆದರ್ಶಗಳಲ್ಲಿ ಹಲವನ್ನಾದರೂ ಆಚರಣೆಯಲ್ಲಿ ತರಬಹುದಾದ ಪ್ರಯತ್ನವೇ ಅವರ ವರ್ಧಂತಿ ಜಯಂತಿ ಉತ್ಸವಾಚರಣೆಗೆ ಮೂಲ. ಅದರ ಉದ್ದೇಶವನ್ನು ಇನ್ನೂ ಹಿರಿದುಗೊಳಿಸಿ, ಸಂಗೀತದ ಮೂಲಕ ಸಾಂಸ್ಕೃತಿಕ ಸಮನ್ವಯದ ಆದರ್ಶವನ್ನು ಸಾಧಿಸಲೆಂದೇ ಅನ್ನಮಾಚಾರ್ಯ ಜಯಂತಿಯನ್ನು ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವವಾಗಿ ಪರಿವರ್ತಿಸಿ, ಅಖಿಲಭಾರತ ಮಟ್ಟದ ವಾಗ್ಗೇಯಕಾರ ಆರಾಧನೆಯಾಗಿ ಆಚರಿಸಲಾಗುತ್ತಿದೆ. ಇಲ್ಲಿ ದೇಶದ ಭಾಷಾಭೇದವನ್ನು ಹಿಂದಿಕ್ಕಿ ಹಲವು ಭಾಷೆಯ ಹಲವು ಸಂಗೀತಗಾರರನ್ನು ಕರೆದು, ಅವರಿಂದಾದ ಭಾಷಾತೀತ ಭಾವಕಲಾಪದಲ್ಲಿ, ಸಂಗೀತ ಸಲ್ಲಾಪದಲ್ಲಿ ಭಾವೈಕ್ಯವನ್ನು ಸಾಧಿಸುವ ಪ್ರಯತ್ನ ನಡೆದಿದೆ.

ರತ್ನಾಕರಾಧೌತ ಪದಾಂ ಹಿಮಾಲಯ ಕಿರೀಟಿನೀಂ ।
ಬ್ರಹ್ಮರಾಜರ್ಷಿ ರತ್ನಾಢ್ಯಾಂ ವಂದೇ ಭಾರತ ಮಾತರಂ ॥



ಅನ್ನಮಾಚಾರ್ಯ ತೆಲುಗು ವಾಗ್ಗೇಯಕಾರರಲ್ಲಿ ಅಗ್ರಶ್ರೇಣಿಯಲ್ಲಿ ನಿಲ್ಲುವ ಚೈತನ್ಯ. 15 ನೇ ಶತಮಾನದ ಆಂಧ್ರದಲ್ಲಿನ ರಾಜಂಪೇಟೆಯ ತಾಳ್ಳಪಾಕ ಗ್ರಾಮದಲ್ಲಿ ಹುಟ್ಟಿ, ತಿರುಪತಿಯ ಶ್ರೀ ವೆಂಕಟೇಶ್ವರನನ್ನು ಸೇರಿ, ಸ್ವಾಮಿಗೆ ಮೂವತ್ತೆರಡು ಸಾವಿರ ಸಂಕೀರ್ತನ ಸುಮಮಾಲೆಯನ್ನರ್ಪಿಸಿದ ಪದಕವಿತಾಪಿತಾಮಹ. ಅಂತಹ ಹಿರಿಯ ಚೇತನದ ನೆನಪಿನಲ್ಲಿ ತಿ. ತಿ. ದೇ. ಗಳು, ಆತನ ಜಯಂತಿ ವರ್ಧಂತಿಗಳನ್ನು ನಡೆಸಿಕೊಂಡು ಬಂದಿದ್ದು, ಹೋದ ವರುಷದಿಂದ ಅನ್ನಮಾಚಾರ್ಯ ಜಯಂತಿಯನ್ನು ಶ್ರೀವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವದ ಹೆಸರಿನಲ್ಲಿ ಅಖಿಲಭಾರತ ಸಂಗೀತ ವಿದ್ವತ್ ಭಕ್ತ ರಸಿಕರ ಭಾಗವಹಿಸುವಿಕೆಯಿಂದ ಭಾವೈಕ್ಯದ ಸಾಧನೆಯಲ್ಲಿ ತಮ್ಮ ಪಾಲನ್ನೂ ಸೇವೆಯನ್ನೂ ಸಲ್ಲಿಸುತ್ತಿದೆ.

ಈಬಾರಿ ಶ್ರೀವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವ ಮೇ 23 ರಿಂದ ಮೇ 31 ರವರೆಗೆ 9 ದಿನಗಳ ಕಾಲ ತಿರುಪತಿಯಲ್ಲಿ ನಡೆದು ಜನಮನವನ್ನು ತಣಿಸಿದ್ದೇ ಅಲ್ಲದೆ, ಭಾರತೀಯ ಸಂಸ್ಕೃತಿಯ ಮೂಲಭೂತ ಏಕತೆಯನ್ನು ಕಣ್ಣು ಕಟ್ಟುವಂತೆ ಮಾಡಿದವು.

(37ನೇ ಪುಟ ನೋಡಿ)



# ಶ್ರೀವೆಂಕಟೇಶ್ವರ ಅನ್ನಮಾಚಾರ್ಯ

**23–5–86** # ಸಂಗೀತೋತ್ಸವ **31–5–86**



ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವದ ಸಭಾಸದರು.

# ಆಳ್ವಾರುಗಳು ಹಾಗೂ ದಿವ್ಯಕ್ಷೇತ್ರಗಳು

ಭಾರತದಲ್ಲಿ 106 ದಿವ್ಯದೇಶಗಳಿವೆ. ಇವುಗಳಲ್ಲಿ ಶೇಕಡ 90 ರಷ್ಟು ದಕ್ಷಿಣಭಾರತದಲ್ಲಿವೆ. ಇವುಗಳ ರಚನೆ ಹೂವಿನ ಗೊಂಚಲಿನ ಹಾಗಿದೆ. ಉದಾ: ಮಲೆಯಾಳದ 13 ದಿವ್ಯದೇಶಗಳು, ನವತಿರುಪತಿ, ಕಂಚಿ, ಕುಂಭಕೋಣ, ಶ್ರೀರಂಗ ಇತ್ಯಾದಿ. ತಿರುಪ್ಪಾರ್‌ಕಡಲ್ (ಕ್ಷೀರಸಮುದ್ರ) ಮತ್ತು ಪರಮಪದ (ವೈಕುಂಠ) ಭೂಲೋಕದಲ್ಲಿಲ್ಲದೆ ಅಗೋಚರವಾಗಿವೆ. ದಿವ್ಯಸೂರಿಗಳಾದ ಆಳ್ವಾರುಗಳು ಸ್ತುತಿಸಿ ಮಂಗಳಾಶಾಸನ ಮಾಡಿದ್ದರಿಂದ ಇವುಗಳು 'ದಿವ್ಯಕ್ಷೇತ್ರ'ಗಳೆಂದು ಪ್ರಸಿದ್ಧಿಯಾಗಿವೆ. ಕ್ಷೇತ್ರದ ಪ್ರಾಕಾರ, ರಾಜಗೋಪುರ, ಅರ್ಚಾಮೂರ್ತಿಯ ಸೌಂದರ್ಯ, ಕ್ಷೇತ್ರವಿರುವ ನಗರ ಮತ್ತು ಅದರ ಪರಿಸರ ಆಳ್ವಾರುಗಳಿಗೆ ಆಕರ್ಷಣೆ ಉಂಟುಮಾಡುವಂತಹವು. ದೇವಸ್ಥಾನದ ಬಹು ಆಕರ್ಷಿತವಾದ ಭಾಗ ರಾಜಗೋಪುರ. ಶ್ರೀರಂಗ, ಶ್ರೀವಿಲ್ಲಿಪುತ್ತೂರು, ಕುಂಭಕೋಣ ಮತ್ತು ತಿರುಕೋಯಿಲೂರ್ ರಾಜಗೋಪುರಗಳು ಬಹಳ ಎತ್ತರವಾದುವು.

ಕೆಲವು ಕ್ಷೇತ್ರಗಳು ಮತ್ತು ಇವುಗಳಿರುವ ನಗರಗಳು ಬಹಳ ಭವ್ಯವಾಗಿದ್ದರಿಂದ 'ವೈಕುಂಠನಗರ' ಅಥವಾ 'ವಿಣ್ಣಹರಂ' ಎಂದು ಪ್ರಸಿದ್ಧಿಯಾಗಿವೆ. ಉದಾ: ನಂದಿ ಮತ್ತು ಅರಿಮೇಗ್ಗು ವಿಣ್ಣಹರಂ. ಎಲ್ಲಾ ದಿವ್ಯದೇಶಗಳು ತಮ್ಮವೇ ಆದ ವಿಶೇಷ ಪೂಜಾವಿಧಿ ಮತ್ತು ಉತ್ಸವಗಳಿಂದ ಪ್ರಸಿದ್ಧಿಯಾಗಿವೆ. ಅರ್ಚಾ ಮತ್ತು ಸುಧಾಮೂರ್ತಿಯ ವಿವರಣೆ ವೇದ ಮತ್ತು ಪುರಾಣಗಳಲ್ಲಿದೆ. ಉಪ್ಪಿಲಿಯಪ್ಪನ್ (ತಿರುವಿಣ್ಣಹರಂ) ಮತ್ತು ತಿರುಕ್ಕಣ್ಣಮಂಗೈ ಕ್ಷೇತ್ರಗಳನ್ನು ಬಿಟ್ಟು ಸಾಮಾನ್ಯವಾಗಿ ದ್ರಾವಿಡ ದಿವ್ಯದೇಶಗಳಲ್ಲಿ ಮೂಲವರಿಗೆ ತಿರುಮಂಜನವಿರುವುದಿಲ್ಲ. 'ತೈಲಕ್ಕಾಪ್'' ಎಂಬ ಎಣ್ಣೆಸ್ನಾನವಿರುತ್ತೆ- ಇದಕ್ಕೆ ಕಾರಣ ಅವು ಸುಧಾಮೂರ್ತಿಗಳು. (ಸುಣ್ಣ ಮಣ್ಣು ಮಿಶ್ರಿತವಾದ ಗಾರೆಯಿಂದ ಮಾಡಲ್ಪಟ್ಟಿರುವುವು)

ಕಂಚಿಯ ಅತ್ತಿವರದರು ಮರದಲ್ಲಿ ಮಾಡಲ್ಪಟ್ಟ ಮೂರ್ತಿ. ಉತ್ಸವಮೂರ್ತಿಗಳು ಸ್ವರ್ಣ, ಬೆಳ್ಳಿ ಅಥವಾ ಮಿಶ್ರಪಂಚಲೋಹಗಳಿಂದ ಮಾಡಲ್ಪಟ್ಟಿರುತ್ತೆ. ತಿರುಮಾಲಿರುಂ ಶೋಲೈನ ಸುಂದರ ಬಾಹು ಅಳಹರ್, ವಾನಮಾಮಲೈನ ತೋತಾದ್ರಿ, ಮತ್ತು ಶ್ರೀವೈಕುಂಠಂನ ಚೋರಪ್ಪಿರಾನ್ ಪೂರ್ಣವಾಗಿ ಸ್ವರ್ಣಮೂರ್ತಿಗಳು.

ಮೂಲವರನ್ನು ಶಯಿನಿಸಿರುವ ಅಥವಾ ಕುಳಿತಿರುವ ಅಥವಾ ನಿಂತಿರುವ ಭಂಗಿಗಳಲ್ಲಿ (ತಿರುಕ್ಕೋಯಿಲಂ) ನೋಡಬಹುದು. ಕಂಚಿಯ ಪರಮೇಶ್ವರ ವಿಣ್ಣಹರಂ ಕ್ಷೇತ್ರದಲ್ಲಿ ಮಾತ್ರ ಈ ಮೂರೂ ಭಂಗಿಗಳಿರುವ ಮೂರ್ತಿಗಳನ್ನು ಒಂದರಮೇಲೊಂದಂತಸ್ತಿನಲ್ಲಿ ನೋಡಬಹುದು. ತಿರುತ್ತಂಗಾಳ್ ಕ್ಷೇತ್ರದಲ್ಲಿ ಮಾತ್ರ ತಾಯಾರ್, ಸನ್ನಿಧಿಯಲ್ಲಿ ನಿಂತಿರುವ ಭಂಗಿಯಲ್ಲಿದ್ದಾರೆ. ಕುಂಭಕೋಣದ ತಿರುಚ್ಚೇರೈನ ಸಾರನಾಥಸ್ವಾಮಿ ಕಮಲದ ಮೇಲೆ ನಿಂತು ಕೈಯಲ್ಲಿ ಕಮಲವನ್ನು ಹಿಡಿದಿರುವುದನ್ನು ಆಳ್ವಾರುಗಳು ವಿಶೇಷವಾಗಿ ಸ್ತುತಿಸಿದ್ದಾರೆ. ಇದೇ ರೀತಿ ತೇರಳಂದೂರು ಕ್ಷೇತ್ರದ ಉತ್ಸವಮೂರ್ತಿಯಾದ ಗೋಸಖರನ್ನು (ಆಮರುವಿಯಪ್ಪನ್) ಬಹು ಮುದ್ದಾದ ಹಸು ಮತ್ತು ಕರು ಸುತ್ತಿರುವುದನ್ನು ತಿರುಮಂಗೈಯಾಳ್ವಾರರು 'ತಿರುನೆಡುಂದಾಂಡಹಂ'ನಲ್ಲಿ ಕೊಂಡಾಡಿದ್ದಾರೆ

ಆಮರುವಿನಿರೈಮೆಯತ್ತ ಅಮರರ್
ಕೋಮಾನ್
ಅಣಿಯಳುನೂರ್ ನಿನ್ರಾನುಕಿನ್ರೇ ಶೆನ್ರು
(ತಿ. 26)

ದಕ್ಷಿಣದೇಶದಲ್ಲಿ ಅದರಲ್ಲೂ ಮಲಯಾಳ ದಿವ್ಯದೇಶಗಳ ಮೂಲವರರು ಬೃಹದಾಕಾರವಾದವು. ಶಯನಿಸಿರುವ ಮೂರ್ತಿಗಳಲ್ಲಿ ಅನಂತಪದ್ಮನಾಭಸ್ವಾಮಿ ಬಹಳ ದೊಡ್ಡದು. ಇದನ್ನು 2 ದ್ವಾರಗಳಿಂದ ನೋಡಬೇಕು. ಒಬ್ಬ ದೊಡ್ಡ ಮಹಾರಾಜ ಹಾಯಾಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿರುವಂತಿದೆ. ನಗೆಮುಖ, ನೀಳವಾದ ಮೂಗು, ಶಿವನಮೇಲೆ ಅನುಗ್ರಹ ಹಸ್ತ, ಕೆಂಪು ರೇಷ್ಮೆ ವಸ್ತ್ರ, ರಾತ್ರಿ ದೀಪಾಲಂಕಾರ, ಸಭಾಭವನ, ಶಿಲ್ಪಕೃತಿಗಳನ್ನು ನೋಡಲು ಎರಡು ಕಣ್ಣುಗಳು ಸಾಲವು. ಇದಕ್ಕೆ ತಾನೆ ಆಂಡಾಳ್ ಮಹಾತಾಯಿ ಹೇಳುವುದು.

"ಅನಂತಪದ್ಮನಾಭನನ್ನೂ, ತಿರುಕ್ಕಣ್ಣಪುರಂ ಶೌರಿರಾಜರನ್ನೂ ಆರಾವಮುದನನ್ನೂ, ಚಕ್ರಪಾಣಿಯನ್ನೂ, ತಿರುಪತಿ, ಶ್ರೀರಂಗರನ್ನೂ ನೋಡದೆ ಇರುವವವನ ಜನ್ಮ ವ್ಯರ್ಥ." (ತಿರುಪ್ಪಾವೈ)

ನವತಿರುಪತಿಗಳಲ್ಲೊಂದಾದ ತಿರುವುಳಿಯಂಗುಡಿಯಲ್ಲಿ ಶಯನಿಸಿರುವ ಭೂಮಿಪಾಲನ್ (18 ಅಡಿ ಉದ್ದ) ಮತ್ತು ಇಂದಳೂರಿನ ಪರಿಮಳರಂಗನಾಥಸ್ವಾಮಿ ಶಿಲಾಮೂರ್ತಿಗಳ ಕೆತ್ತನೆಯ ಕಲಾಕೌಶಲವು ಬೆರಗುಗೊಳಿಸುವಂತದ್ದಾಗಿವೆ. ಉಲಹಳಂದ ಪೆರುಮಾಳ್ ಮತ್ತು ಪಾಂಡವದೂತರ್ (ಕಂಚಿ) ಬೃಹದಾಕಾರವಾದ ಹಾಗೂ ಎತ್ತರವಾದ ಮೂರ್ತಿಗಳು.

## ಆಳ್ವಾರುಗಳು :

'ಆಳ್ವಾರ್'' ಎಂದರೆ ಭಗವದ್ಭಕ್ತಿ ಎಂಬ ಸಾಗರದಲ್ಲಿ ಮುಳುಗಿರುವವರು ಎಂದರ್ಥ. ಇವರುಗಳು ಭಕ್ತಿಪಂಥಕ್ಕೆ ಸೇರಿದ ಮಹಾಸಂತರುಗಳು, ಆಂಡಾಳ್ ಪೆರಿಯಾಳ್ವಾರರಲ್ಲಿಯೂ ಮತ್ತು ಮಧುರಕವಿ ಆಳ್ವಾರ್ ನಮ್ಮಾಳ್ವಾರರಲ್ಲಿಯೂ ಅಂತರ್ಭಾವರಾಗಿದ್ದಾರೆ. ಇನ್ನೂ 10 ಆಳ್ವಾರರನ್ನು 'ಅಭಿನವ ದಶಾವತಾರ' ಎಂದು ಕರೆಯಲಾಗಿದೆ. ಪರಾಶರಭಟ್ಟರು–

ಶ್ರೀ ಸಿ. ಗೋವಿಂದಾಚಾರ್ಯ



## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ—517501

ಭೂತಂ ಸರಶ್ಚ ಮಹದಾಹ್ವಯ ಭಟ್ಟನಾಥ
ಶ್ರೀ ಭಕ್ತಿಸಾರ ಕುಲಶೇಖರ
ಯೋಗಿವಾಹಾನ್
ಭಕ್ತಾಂಘ್ರಿರೇಣು ಪರಕಾಲ
ಯತೀಂದ್ರಮಿಶ್ರಾನ್
ಶ್ರೀಮತ್ ಪರಾಂಕುಶಮುನಿಂ
ಪ್ರಣತೋಸ್ಮಿ ನಿತ್ಯಂ

ಎಂದು ಸ್ತುತಿಸಿದ್ದಾರೆ. ಭಗವಂತನಿಗೆ ಜಾತಿ ಮತ ಭೇದಗಳಿಲ್ಲ ಎಂಬುದಕ್ಕೆ ಆಳ್ವಾರುಗಳೇ ನಿದರ್ಶನ, ಪೆರಿಯಾಳ್ವಾರ್, ತೊಂಡರಡಿಪ್ಪೊಡಿ ಮತ್ತು ಮಧುರಕವಿ ಆಳ್ವಾರುಗಳು ದ್ವಿಜಕುಲಕ್ಕೆ ಸೇರಿದವರು. ಪಾಣರು ಹರಿಜನರು, ಕುಲಶೇಖರರು ಕ್ಷತ್ರಿಯರು,ನಮ್ಮಾಳ್ವಾರ್ ವೇಳಾಳರು. ಇವರುಗಳು ಭಗವಂತನ ಮತ್ತು ನಿತ್ಯಸೂರಿಗಳ ಅಂಶವೆಂದು ಭಾವನೆ. ಇವರೆಲ್ಲರೂ ಪರಮೈಕಾಂತಿಗಳು. 'ಏಕೋ ದೇವಃ ಕೇಶವಃ' ಎಂಬಂತೆ ಸದಾ ಭಗವಂತನಲ್ಲಿಯೇ ತಲ್ಲೀನರಾಗಿರುವವರು. ಅವನ ಸೇವೆ ಬಿಟ್ಟು ಬೇರೇನನ್ನೂ ಅಪೇಕ್ಷಿಸರು. ಇವರ ಕೃತಿಗಳನ್ನು 'ಆಳ್ವಾರ್ ಪಾಡಲ್', ದ್ರಾವಿಡವೇದ, ದಿವ್ಯಪ್ರಬಂಧ ಎಂದು ಪುರಾಣ ಮತ್ತು ಭಾಗವತದಲ್ಲಿ ಸೂಚನೆ ಇದ್ದರೂ ಇವರ ಕಾಲವನ್ನು ಗುರುತಿಸುವುದು ಕಷ್ಟ. ಇವರುಗಳ ಕಾಲ ಕಲಿಯುಗದ ಆದಿ ಮತ್ತು ದ್ವಾಪರಯುಗದ ಅಂತ್ಯ ಎಂದು ಹೇಳಬಹುದು. ಇವರುಗಳ ನಂತರ ಶ್ರೀವೈಷ್ಣವ ಆಚಾರ್ಯಪರಂಪರೆ ನಾಥಮುನಿಗಳಿಂದ ಆರಂಭವಾಗುವುದು.

ಅಯೋನಿಜರುಗಳಾದ ಪೊಯ್‌ಗೈ, ಭೂತತ್ತಾಳ್ವಾರ್ ಮತ್ತು ಪೇಯಾಳ್ವಾರರು, ಮೊದಲಾಳ್ವಾರರುಗಳು ಒಂದೇ ಸಂವತ್ಸರದಲ್ಲಿ ಜನಿಸಿದವರು. ತಿರುಮಳಿಶೈಯಾಳ್ವಾರರೂ ಸಹ ಈ ಸಂವತ್ಸರದಲ್ಲಿ ಜನಿಸಿದ್ದಾರೆ. ಮೊದಲಾಳ್ವಾರುಗಳನ್ನು ಒಟ್ಟುಗೂಡಿಸಿದವನು ಭಗವಂತ. ಸ್ಥಳ—ತಿರುಕೋಯಿಲೂರು (ದೇಹಳೀಪುರಿ) "ಅನ್ಬೇತಹಳಿಯಾ" ಎಂದು ಪೊಯ್‌ಗೈ ಆಳ್ವಾರರೂ, "ವ್ನೆಯುಂತಹಳಿಯಾ" ಎಂದು ಭೂತಪ್ಪಾಳ್ವಾರರೂ, 'ತಿರುಕಂಡೇನ್ ಪೊನ್ಮೇನಿ ಕಂಡೇನ್' ಎಂದು ಪೇಯಾಳ್ವಾರರೂ (ಕ್ರಮವಾಗಿ 1, 2 ಮತ್ತು 3 ನೇ ತಿರುವಂದಾದಿಗಳು) ತಮಗೆ ಆದ ಜ್ಞಾನೋದಯವನ್ನು ಅನುಪಮವಾಗಿ ಸ್ತುತಿಸಿದ್ದಾರೆ. ಪರಜ್ಞಾನ, ಪರಭಕ್ತಿ ಮತ್ತು ಸಾಕ್ಷಾತ್ಕಾರ- ಇವು ಮೂರು ಮನುಷ್ಯನಿಗೆ ಇರಬೇಕೆಂಬುದೇ ಈ ಮೂವರ ಅವತಾರದ ಸಂಕೇತ. ಇವೆಲ್ಲವೂ ಅವರ ಸಂಕಲ್ಪ ಮತ್ತು ಸಂದೇಶವಾಗಿವೆ. ಇವರುಗಳು ಆದಿ ಆಳ್ವಾರರುಗಳಾದ್ದರಿಂದ, ಇವರು ಹಾಡಿರುವ ಕ್ಷೇತ್ರಗಳು ಬಹಳ ಪ್ರಾಚೀನವಾದುವು ಎಂದು ಹೇಳಬಹುದು, ಉದಾ: ತಿರುಕೋಯಿಲೂರ್, ತಿರುಪತಿ, ಶ್ರೀರಂಗ ಯಥೋಕ್ತಕಾರಿ – ಇತ್ಯಾದಿ. ಭಕ್ತಿಸಾರರ ಆಳ್ವಾರ್ ಆಗುವ ಮುನ್ನ ಶಿವಭಕ್ತರಾಗಿದ್ದರು ಪೇಯಾಳ್ವಾರರಿಂದ ಇವರಿಗೆ ಜ್ಞಾನೋದಯ ವಾಯಿತು. ಇವರು ಯಥೋಕ್ತಕಾ[illegible] ಮತ್ತು ವೆಂಕಟನನ್ನು ಹೆಚ್ಚಾಗಿ ಮಂಗ[illegible] ಶಾಸನ ಮಾಡಿದ್ದಾರೆ. ಇವರ ಶ್ರದ್ಧಾಭಕ್ತಿ ಮತ್ತು ಸ್ತೋತ್ರಗಳಿಗೆ ತೃಪ್ತನಾದ ಕುಂಭ ಕೋಣದ ಆರಾವಮುದನು, ಇವರನ್ನು ಅನುಗ್ರಹಿಸಲು ನಾಗಪರ್ಯಂಕದಿಂದ ಏಳಲು ಹೋಗುವನು. ಇದನ್ನು ನೋಡಿದ ಆಳ್ವಾರರ 'ತೊಂದರೆ ತೆಗೆದುಕೊಂಡು ಏಳಬೇಡ, ಹಾ[illegible] ಶಯನಿಸು' ಎಂದು ಪ್ರಾರ್ಥಿಸುವರು. ಇದನ್ನು ಕೂಡ ಅವನು ಲಾಲಿಸಿ ದ್ವಿಭಂಗಿಗಳಲ್ಲಿ (ಶಯ[illegible] ಸಿರುವ ಹಾಗೂ ಏಳುವ) ಗೋಚರಿಸುವನು.

ತೊಂಡರಡಿಪ್ಪೊಡಿ ಆಳ್ವಾರರು ಶ್ರೀರಂಗವನ್ನು ಮಾತ್ರ ಹಾಡಿ 'ಪತಿವ್ರತಾಳ್ವಾರ್' ಎಂದು ಕ[illegible]ಯಲ್ಪಟ್ಟಿದ್ದಾರೆ. ಪೆರಿಯಾಳ್ವಾರ್‌ಗೆ 'ವಿಷ್ಣು ಚಿತ್ತರ್' ಎಂದು ಹೆಸರು. ಕಾರಣ ಇವರು ಸದಾ ಭಗವಂತನ ಮನಸ್ಸಿನಲ್ಲಿ ನೆಲೆಸಿರುವವರು ಆಳ್ವಾರ್ ಎಂದರೆ ನಮ್ಮಾಳ್ವಾರ್, ಭಗವಂತನಿ[illegible] ಬಹು ಪ್ರಿಯರಾದವರು. ಇವರು ಯಾವ ಕ್ಷೇತ್ರಕ್ಕೂ ಹೋಗಿ ಹಾಡಿಲ್ಲ. ಹುಣಿಸೇಮರ (ಪುಳಿಯಾಳ್ವಾರ್) ಕೆಳಗೆ ಕುಳಿತು ತಮ್ಮ ತಪೋಶಕ್ತಿಯಿಂದಲೇ ಎಲ್ಲಾ ದಿವ್ಯದೇಶದ ದೇವರುಗಳನ್ನು ದರ್ಶನಮಾಡಿರುವರು. ವೈಷ್ಣ[illegible] ದೇವಾಲಯಗಳಲ್ಲಿ ಶಠಾರಿ ಎಂಬ ಪದ್ಧತಿ ಈ ಪ್ರಧಾನ ಆಳ್ವಾರರಿಂದ ಜಾರಿಗೆ ಬಂದದ್ದು. ಇದಕ್ಕಾಗಿಯೇ ಇವರಿಗೆ ಶಠಗೋಪನ್—ಶಠಾ[illegible] ಮುನಿ ಎಂದು ಹೆಸರು.

ಎಲ್ಲಾ ಆಳ್ವಾರುಗಳು ಎಲ್ಲಾ ಕ್ಷೇತ್ರಗಳನ್ನು ಸಂದರ್ಶಿಸಿ ಹಾಡಿಲ್ಲ. ಕೆಲವರು ತಾವು ಇದ್ದಲ್ಲೇ ಬೇರೆ ಕ್ಷೇತ್ರಗಳನ್ನು ಹಾಡಿದ್ದಾರೆ. ಕೆಲವು ಕ್ಷೇತ್ರಗಳನ್ನು ಆಳ್ವಾರುಗಳಾರೂ ಹಾಡಿಲ್ಲ ದೆ[illegible] ಪ್ರಾರ್ಥನಾಮಂದಿರಗಳಾಗಿವೆ. ಉದಾ: ಉತ್ತಮರ್‌ಕೋಯಿಲ್. ಬಹುಹೆಚ್ಚಿನ ಸಂಖ್ಯೆಯಲ್ಲಿ ನಾನಾಕ್ಷೇತ್ರಗಳನ್ನು ನೋಡಿ ಹಾಡಿರ[illegible]ವವರು ಸಂತರ ಶ್ರೇಣಿಯಲ್ಲಿ ಕೊನೆಯವರಾದ ತಿರುಮಂಗೈ ಆಳ್ವಾರರು. ಇವರ ಪೂರ್ವಚರಿತ್ರೆ ಅದ್ಭುತವಾದುದು. ಭಗವತ್ಕಟಾಕ್ಷದಿಂದ ಪುನೀತರಾಗಿ ಜ್ಞಾನೋದಯ ಹೊಂದಿ ಆಳ್ವಾರ್ ಆಗುವರು. 'ಭಕ್ತಿಯೇ ಮುಕ್ತಿಗೆ ಮಾರ್ಗ' ಎಂಬ ನೀತಿಯಿಂದ 86 ದಿವ್ಯಕ್ಷೇತ್ರಗಳನ್ನು ಮಂಗಳಾಶಾಸನ ಮಾಡಿರುವ ಏಕೈಕವೀರ ಭಕ್ತಾಗ್ರೇಸರು. ಇವರ ಭಕ್ತಿ ಅಮೋಘವಾದುದು ಇಂದಳೂರು ಪರಿಮಳರಂಗನಾಥನು ಇವರಿಂದ ತೆಗಳಲ್ಪಟ್ಟರೂ ಸಹ ಸೇವೆಯನ್ನು ಕೊಡುವರು ('ವಾಳ್‌ನ್ದೇ ಪೋಂನೀರೇ' –ಪೆರಿಯ ತಿರುಮೊಳಿ

ತಾವು ಮಾಡಿದ ಮಂಗಳಾಶಾಸನವನ್ನು ತಾವೇ ಹೊಗಳಿ ತಿರುಕಣ್ಣ ಮಂಗೈನ ಭಕ್ತವತ್ಸಲದೇವರನ್ನು 'ನನ್ನ ಹತ್ತಿರ ಬರುವೆಯಾ ನಿನಗಿವೆಲ್ಲಾ ಹೇಳಿ ಕೊಡುವೆನು' ಎಂದು ಆಹ್ವಾನಿಸುವರು. ಶೀಗಾಳಿ (ವಿಣ್ಣಹರಂ) ಕ್ಷೇತ್ರದಲ್ಲಿ ತಿರುಜ್ಞಾನ ಸಂಬಂಧರ್‌ರನ್ನು ವಾದದಲ್ಲಿ ಗೆದ್ದು 'ವೇಲ್'ಅನ್ನು ಬಹುಮಾನವಾಗಿ ಪಡೆಯುವರು. ಅಹೋಬಿಲ ಸೇವೆ ಕಠಿಣವಾದುದು. ಕಾರಣ ಅದರ ಪರಿಸರ ಕಾಡು ಮತ್ತು ಕ್ರೂರಮೃಗಗಳಿಂದ ಕೂಡಿದೆ. (ಶಿಂಗವೇಳ್‌ಕುನ್ರಂ–ಪೆರಿಯ ತಿರುಮೊಳಿ) ಇದೇ ರೀತಿ ಉತ್ತರಭಾರತದ ಬೇಗೆಯಿಂದ ಕೂಡಿದ ತಿರುವಯೋಧ್ಯಾ (ಚಕ್ರವರ್ತಿ ತಿರುಮಗನ್) ಮಥುರ ಮತ್ತು ಬಹಳ ಚಳಿಯಿಂದ ಕೂಡಿದ ತಿರುವದರಿ ಕ್ಷೇತ್ರಗಳನ್ನು ಎಷ್ಟೇ ದೂರವಿರಲಿ ಕಷ್ಟವಿರಲಿ ನೋಡಿ ಸ್ತುತಿಸಿರುವುದು ಅವರ ಭಕ್ತಿಯ ಪರಮಾವಧಿಯನ್ನು ಸೂಚಿಸುತ್ತದೆ. ಅಧ್ಯಯನೋತ್ಸವವನ್ನು ಜಾರಿಗೆ ತಂದದ್ದು ಮತ್ತು ಶ್ರೀರಂಗ ಪ್ರಾಕಾರ ನಿರ್ಮಾಣದಲ್ಲಿ ಇವರ ಸೇವೆ ಅಪಾರವಾದುದು. ಇವರ ಹುಟ್ಟೂರಾದ ತಿರುವಾಲಿ ತಿರುನಗರಿ ಸುತ್ತ 11 ಕ್ಷೇತ್ರಗಳಿವೆ. ಇವುಗಳೇ ನಾಂಗೂರು ದಿವ್ಯದೇಶಗಳು. ತೈ ಅಮಾವಾಸ್ಯೆಯಂದು ಈ 11 ದಿವ್ಯದೇಶದ ಉತ್ಸವರರು ಗರುಡಾರೂಢರಾಗಿ ಮತ್ತು ಆಳ್ವಾರರು ಹಂಸವಾಹನದ ಮೇಲೆ ಕುಳಿತು ತಿರುನಾಂಗೂರಿನಲ್ಲಿ ಬಿಜಯ ಮಾಡುವರು. ಈ ಪದ್ಧತಿ ಆಳ್ವಾರ್ ತಿರುನಗರಿಯಲ್ಲೂ ಸಹ ಇದೆ.

## ಲೋಕಾನುಗ್ರಹ :

ಈ ಪ್ರಪಂಚಕ್ಕೆ ಆಳ್ವಾರರ ಮತ್ತು ದಿವ್ಯದೇಶಗಳ ಕೊಡುಗೆ ಅಪಾರವಾದುದು. ಉದಾ: 1. 'ಪಲ್ಲಾಂಡು ಪಲ್ಲಾಂಡು ಪಲ್ಲಾಯಿರತ್ತಾಂಡು' ಎಂಬ ತಿರುಪಲ್ಲಾಂಡನ್ನು ಪೆರಿಯಾಳ್ವಾರರು ಮಧುರೆಯ ಕೂಡಲ್ ಅಳಹರ್ ಕ್ಷೇತ್ರದಲ್ಲಿ ಅಂದು ಹಾಡಿದ್ದು ನಮಗೆ ಇಂದು ನಿತ್ಯಾನುಸಂಧಾನ ಮಾಡುವಂತಾಗಿದೆ. 2. ಆಂಡಾಳ್ 'ತಿರುಪ್ಪಾವೈ' ಎಲ್ಲರಿಗೂ–ಅದರಲ್ಲೂ ಹೆಂಗಸರು ಮತ್ತು ಕನ್ಯೆಯರಿಗೆ ಕಬ್ಬಿನರಸ, ಹಾಲು, ಜೇನು ಮಿಶ್ರಿತವಾದ ಅಮೃತದಂತಿದೆ. 'ಶಿಟ್ರಂಶಿರುಕಾಲೈ' ಇಲ್ಲದೆ ಭಗವದಾರಾಧನ ಅಪೂರ್ಣ ವಿವಾಹ ಮಹೋತ್ಸವದಲ್ಲಿ 'ವಾರಣಮಾಯಿರಂ' ಹಾಡುವುದು ಒಳ್ಳೆ ಸಂಪ್ರದಾಯ ಇದು ಶ್ರೀವಿಲ್ಲಿಪುತ್ತೂರಿನ ಮಹಾನ್ ಕೊಡುಗೆ. 3. ಲುಪ್ತವಾಗಿ ಹೋಗಿದ್ದ ದಿವ್ಯ ಪ್ರಬಂಧಗಳ ಪುನರ್ ವ್ಯವಸ್ಥೆ ಆದದ್ದು ಕುಂಭಕೋಣದ ಆರಾವಮುದನ ಕೃಪೆ ಮತ್ತು ನಾಥಮುನಿಗಳ ಸೇವೆಯಿಂದ. 4. ಆಚಾರ್ಯಪರಂಪರೆಯ ಉದಯ, ವಿಶಿಷ್ಟಾದ್ವೈತಮತ ಪ್ರಚಾರ ಮತ್ತು ಅಸ್ತಿತ್ವಕ್ಕೆ ಬಂದದ್ದು, ಪೂಜಾವಿಧಿಗಳು, ದೇವಾಲಯದ ಆಡಳಿತ, ಅರೆಯರ್ ಹಾಡುಗಳು, ಆಳವಂದಾರ್–ರಾಮಾನುಜರ ವೃತ್ತಾಂತ ಪೆರಿಯಕೋಯಿಲ್ ಶ್ರೀರಂಗದಿಂದ. 5. ಬೃಹದಾಕಾರದ ಪ್ರಕಾರವುಳ್ಳ ತಿರುಕ್ಕುರಂಗುಡಿ ವೈಷ್ಣವನಂಬಿಯ ವರಪ್ರಸಾದದಿಂದ ಸಂತಶ್ರೇಷ್ಠರಾದ ನಮ್ಮಾಳ್ವಾರ್ ಜನನ. 6. ತಿರುವಹೀಂದ್ರಪುರದ ದೇವನಾಯಕ–ಹಯಗ್ರೀವರ ಪ್ರಸಾದ – ದೇಶಿಕರ ಅಮೋಘ ಕೃತಿಗಳು(ದೇವನಾಯಕ ಪಂಚಾಶತ್, ಹಯಗ್ರೀವಸ್ತೋತ್ರ ಇತ್ಯಾದಿ). ಇಲ್ಲಿ ಪಡಿಯುತ್ಸವ ಮತ್ತು ಭಾಗವತರಗಳಿಗೆ ಶ್ರೇಷ್ಠ ಗೌರವ, ಮನ್ನಣೆ ಬಹಳ ಶ್ಲಾಘನೀಯವಾದುದು. 7. ತಿರುಕಚ್ಚಿನಂಬಿ, ರಾಮಾನುಜರು, ಕೂರೇಶರು, ಆಮ್ಮಾಳ್, ದೇಶಿಕಾದಿಗಳು ಬೆಳಕಿಗೆ ಬಂದು ಲೋಕಕ್ಕೆ ತಿಳಿಯುವಂತಾಯಿತು, ವರದನ ಪ್ರಸಾದದಿಂದ.

## ಶ್ರೇಷ್ಠಕ್ಷೇತ್ರಗಳು :

ಶ್ರೀರಂಗಮಂಗಳಮಣಿಂ ಕರುಣಾನಿವಾಸಂ ಶ್ರೀ ವೆಂಕಟಾದ್ರಿಶಿಖರಾಲಯಂ...ತಿರುವಾಶಲ್-ಶ್ರೀರಂಗಂ.

"ಆರಾಮಂ ಶೂಳ್‌ನ್ದ ಅರಂಗಂ" ಎಂದು ಕಲಿಯನ್‌ರು ಹೇಳಿದ ಹಾಗೆ, ಎಲ್ಲಾ ಕ್ಷೇತ್ರಗಳಿಗಿಂತ ಶ್ರೀರಂಗವೇ ಪ್ರಧಾನವಾದುದು. ಈ ಭೋಗಮಂಟಪವನ್ನು ಎಲ್ಲಾ ಆಳ್ವಾರರೂ ಮಂಗಳಾಶಾಸನ ಮಾಡಿದ್ದಾರೆ. ಈ ಕೆಳಕಂಡ ಆಕರ್ಷಣೆಗಳು ಇದಕ್ಕೆ ಕಾರಣವಾಗಿದೆ.

1) ಶ್ರೀರಂಗನಾಥ – ಪೆರಿಯ ಪೆರುಮಾಳ್ (ಇಕ್ಷ್ವಾಕು ಕುಲದೈವ)

2) ಅರ್ಚಾಮೂರ್ತಿಯ ಸೌಂದರ್ಯ

3) ಆದಿ ಕ್ಷೇತ್ರವಾದ ಶ್ರೀರಂಗ ಒಳ್ಳೆ ಪರಿಸರದಿಂದ ಕೂಡಿದೆ.

ಹನುಮದ್ವಿಭೀಷಣರು ತೊಂಡರಡಿಪ್ಪೊಡಿ ಆಳ್ವಾರರು ಮೋಕ್ಷವನ್ನು ನಿರಾಕರಿಸಿ ಬದ್ಧಾಂಜಲಿಗಳಾಗಿ ಸನ್ನಿಧಿಮುಂದೆ 'ಈ ಅರ್ಚಾಮೂರ್ತಿಯ ಸೇವೆಯೇ ಸಾಕು' ಎಂಬಂತೆ ನಿಂತಿದ್ದಾರೆ. 'ಇವನನ್ನು ಕಂಡ ಕಣ್ಣುಗಳು ಬೇರಾವುದನ್ನೂ ಕಾಣದಿರಲಿ' ಎಂದು ಪಾಣರೂ, 'ಇವನ ವಿಷಯದಲ್ಲಿ ನಾ ಹುಚ್ಚನಾಗಿದ್ದೇನೆ' ಎಂದು ಕುಲಶೇಖರರೂ, 'ಇವನನ್ನು ನಾನು ತಿಳಿದಿರುವ ಹಾಗೆ ಬೇರಾರು ತಿಳಿದಿದ್ದಾರೆ' ಎಂದು ಭಕ್ತಿಸಾರರೂ, ರಂಗನನ್ನು ನಾನಾರೀತಿಯಲ್ಲಿ ಕೊಂಡಾಡಿದ್ದಾರೆ. ಆಂಡಾಳ್ ಶ್ರೀರಂಗನಾಥರ ವಿವಾಹ ಬಹಳ ಗಮನಾರ್ಹವಾದುದು. ಏಕೆಂದರೆ ವಿಭವರೂಪದಲ್ಲಿ ಆಂಡಾಳ್ ಅರ್ಚಾಮೂರ್ತಿ ರಂಗನಾಥನಲ್ಲಿ ಐಕ್ಯವಾಗುವಳು. ಎಲ್ಲರೂ ಆ ದಿವ್ಯನೇತ್ರ ಮತ್ತು ಪಾದಗಳಿಗೆ ಮನಸೋತಿದ್ದಾರೆ. 'ಪುಂಡರೀಕಾಕ್ಷ' 'ಶೆಂಗಣ್'' 'ಕಮಲ ಚೆಂಗಣ್'' ಎಂದು ವರ್ಣಿಸಲಾಗಿದೆ. ಕಮಲಗಳನ್ನೂ ಸ್ಪರ್ಧಿಸಿ ಗೆದ್ದ ಆ ಆ ದಿವ್ಯ ಪಾದಗಳನ್ನು ನೋಡಿ ಅಲ್ಲವೇ ದೇಶಿಕರು 'ಪಾದುಕಾಸಹಸ್ರ'ವನ್ನು ರಚಿಸಿದ್ದು! ತೋಳನ್ನೆ ದಿಂಬಾಗಿಟ್ಟುಕೊಂಡು ವಿಭೀಷಣಪುರಿಯನ್ನೇ ವೀಕ್ಷಿಸುತ್ತ ಶಯನಿಸಿರುವುದು ಒಂದು ಮಹಾ ಸಂಕಲ್ಪಕ್ಕಾಗಿಯೇ. ವಿಭೀಷಣನನ್ನು ಮತ್ತು ಅವನ ನಾಡನ್ನು ರಕ್ಷಣೆಮಾಡುವುದು ಮತ್ತು ಕೊನೆಯ ಚೇತನನು ತನ್ನನ್ನು ಸೇರುವವರೆಗೆ ತಾನು ಹೀಗೆ ಶಯನಿಸಿರುವುದು–ಇವೇ ಆ ಮಹಾ ಸಂಕಲ್ಪಗಳಾಗಿವೆ.

## ಸಪ್ತಗಿರಿ :

ಜೀವಕೋಟಿಯ ಬಹು ಮೆಚ್ಚಿನ, ಸಿರಿವಂತ ಹಾಗೂ ಮಹಾಪವಿತ್ರಕ್ಷೇತ್ರ ತಿರುಪತಿ. ಎಲ್ಲ ದಿವ್ಯದೇಶಗಳನ್ನೂ 108 ತಿರುಪತಿ ಎಂದೇ ಕರೆಯಲಾಗಿದೆ. ದಕ್ಷಿಣದ ಅನೇಕಕ್ಷೇತ್ರಗಳಲ್ಲಿ ಮೂಲವರ್ ಶ್ರೀನಿವಾಸಮೂರ್ತಿ ಇದ್ದಾರೆ. ಆ ಕ್ಷೇತ್ರಗಳನ್ನು 'ದಕ್ಷಿಣ ತಿರುಪತಿಯೆಂದು' ಮತ್ತು ಶ್ರೀನಿವಾಸನನ್ನು 'ಅಣ್ಣ' ಎಂದು ಕರೆಯುವುದುಂಟು. ಉದಾ: ಅಣ್ಣನ್ ಕೋಯಿಲ್, ಉಪ್ಪಿಲಿಯಪ್ಪನ್, ವೈಖಾನಸ ಆಗಮಪದ್ಧತಿ ತಿರುಪತಿಯಿಂದ ಆರಂಭವಾಯಿತು. ಶ್ರೀನಿವಾಸನು ಕೋಟೀಶ್ವರ, ಬಾಲಾಜಿ,ಗೋವಿಂದ, ಸಾಲಗಾರ, ಸಾಲಿಗ, ತಿಮ್ಮಪ್ಪಶೆಟ್ಟಿ ಎಂದು ಬಹುವಾತ್ಸಲ್ಯದಿಂದ ಕರೆಯಲ್ಪಟ್ಟಿದ್ದಾನೆ. ಆ ಮಂದಹಾಸದಿಂದ ಕೂಡಿದ ನಗೆಮುಖ ಮತ್ತು ಹಸ್ತಕ್ಕೆ ಎಲ್ಲಾ ಆಳ್ವಾರರು ಮೈಮರೆತಿದ್ದಾರೆ.'ನನ್ನನ್ನು ಆಶ್ರಯಿಸಿ' ಎಂದು ಹೇಳುವಂತಿದೆ ಆ ಹಸ್ತ. ಕಲ್ಲುಸಕ್ಕರೆಯಂತೆ ಇರುವ ವೆಂಕಟಾದ್ರಿಯೇ ವೆಂಕಟನಿಗಿಂತ ಹೆಚ್ಚು ಹಿರಿಮೆಯುಳ್ಳದ್ದು. "ಪ್ರಪದ್ಯೇತಂ ಗಿರಿಂ ಪ್ರಾಯಃ..............ಶರ್ಕರಾಯತಂ (ದಯಾಶತಕ). ಆಳ್ವಾರುಗಳ ಕೆಲವು ನುಡಿಮುತ್ತುಗಳು ಈ ರೀತಿ ಇವೆ.

'ನನ್ನನ್ನು ನಿನ್ನ ಗರ್ಭಗುಡಿಯ ಹೊಸ್ತಿಲಾಗಿ ಮಾಡು. ಆಗ ಸದಾ ನಿನ್ನನ್ನೂ ನಿನ್ನ ಭಕ್ತರನ್ನೂ ಭಾಗವತರನ್ನೂ ಸೇವಿಸುತ್ತಿರಬಹುದು ನಾನು' ಎಂದು ಕುಲಶೇಖರರ ಆಸೆ: "ಪಡಿಯಾಯ್‌ಕಿಡಂದು ಉನ್ ಪವಳವಾಯ್ ಕಾಣ್ಬೇನೆ". "ಸರ್ವೇಶ್ವರನಾದ ನಿನ್ನನ್ನು ಒಂದರೆ ಕ್ಷಣವೂ ಬಿಟ್ಟಿರಲಾರೆ. ನಿನ್ನನ್ನು ಸೇರುವ ಬಗ್ಗೆ ಹೇಳು"–ಎಂದು ನಮ್ಮಾಳ್ವಾರರೂ 'ಇವನನ್ನು ನನ್ನವನನ್ನಾಗಿ ಮಾಡಿ' ಎಂದು ಆಂಡಾಳ್ ಪರಿಸರದ ಮೇಘಗಳನ್ನು ಮತ್ತು ದೇವತೆಗಳನ್ನು ಪ್ರಾರ್ಥಿಸುತ್ತಾಳೆ.

"ಕೈಕಾಲು ಮತ್ತು ದೇಹದಲ್ಲಿ ಶಕ್ತಿ ಇರುವಾಗಲೆ ತಿರುಮಲೆಯನ್ನು ಮತ್ತು ಇತರ ಕ್ಷೇತ್ರಗಳನ್ನು ನೋಡಿ" ಎಂದು ಸಾರುವರು ಭಕ್ತಿಸಾರರು.

'ಅಧೈನೆಂಜಮೇ' ಎಂದು ತಮ್ಮ ಮನಸ್ಸಿಗೆ ಹೇಳುವಂತೆ ಮಂಗಳಾಶಾಸನ ಮಾಡಿದ್ದಾರೆ ತಿರುಮಂಗೈ ಮನ್ನನ್. 'ವಂದಾಯ್ ಎನ್ ಮನತ್ತೆ ಪುಹುಂದಾಯ್'– 'ನನ್ನ ಮನಸ್ಸಿನಲ್ಲಿ ಒಮ್ಮೆ ಪ್ರವೇಶಿಸಿದ್ದೀಯೆ ಇನ್ನು ನಿನ್ನನ್ನು ಒಂದು ಕ್ಷಣವೂ ಬಿಡಲಾರೆ' ಎಂದು ಹಾಡಿದ್ದಾರೆ. ಈ ಕ್ಷೇತ್ರದ ವರ್ಣನೆಯ ಜೊತೆಯಲ್ಲಿ ಇತರ ಕ್ಷೇತ್ರಗಳನ್ನೂ ಸ್ಮರಿಸಿದ್ದಾರೆ. "ಪ್ರಿಯ ಸ್ನೇಹಿತನೇ ಸದಾ ನಿಂತಿದ್ದೀಯಲ್ಲಾ ಕಾಲು ನೋವಾಗುವುದಿಲ್ಲವೇ?" ಎಂಬ ಪಾಶುರ ಬಹಳ ಆತ್ಮೀಯವಾಗಿದೆ.

## ಹಸ್ತಿಶೈಲ-ಕಂಚಿ :

ಯಾವ ಆಳ್ವಾರರೂ ವರದನನ್ನು ನೇರವಾಗಿ ಹಾಡಿಲ್ಲ. ಸ್ವಾಮಿದೇಶಿಕನ್‌ರ ಪ್ರಕಾರ ವರದನ ರೂಪ, ತೇಜಸ್ಸು ಮತ್ತು ಕಾಂತಿಯನ್ನು ನೋಡಿದ ಆಳ್ವಾರುಗಳಿಗೆ ಮೂರ್ಛೆಹೋದಂತಾಗಿ ಸ್ತುತಿಸಲು ಬಾಯೇ ಬರಲಿಲ್ಲವಂತೆ. "ಯಸ್ಯಾನುಭಾವಂ ಅಧಿಗಂತು ಮಶಕ್ನುವಂತಃ ಮುಹ್ಯಂತ್ಯ ಭಙ್ಗುರಧಿಯೋ ಮುನಿಸಾರ್ವಭೌಮಾಃ (ವರದರಾಜಪಂಚಾಶತ್–2) ಕೇಳಿದ್ದನ್ನು ಕೊಡುವವನು ವರದನಾದರೆ, ಹೇಳಿದುದನ್ನು ಮಾಡುವವನು ಯಥೋಕ್ತಕಾರಿ. 'ಶೊನ್ನವಣ್ಣಂ ಶೈದ ಪೆರುಮಾಳ್' ಎಂದು ಭಕ್ತಿಸಾರರ ಹೊಗಳಿಕೆ. ಪಲ್ಲವರಾಜ ಮತ್ತು ಆಳ್ವಾರರಿಗೋಸ್ಕರ ಅವನು ಶಯನಿಸಿರುವ ವಿಶ್ವಸ್ನೇ ಬದಲಿಸುತ್ತಾನೆ (ಇತಿಹಾಸ) ಪಾದಗಳ ಬಳಿ ಸರಸ್ವತಿ (ವೇಗವತಿ) ಇದ್ದಾಳೆ (ಪುರಾಣ). ಒಂದು ಉಲಹಳಂದ ಕ್ಷೇತ್ರ, ಊರಹಂ, ಪೇರಹಂ, ಕಾರಹಂ ಮತ್ತು ಕಾರವಾನಂ ಎಂದು 5 ಕ್ಷೇತ್ರಗಳ ಲೆಕ್ಕ. ಏಕಾಂಬರೇಶ್ವರಾಲಯದ ನಿಲಾ ತುಂಡು ಪೆರುಮಾಳ್ ಮತ್ತು ಕಾಮಾಕ್ಷಿ ಸನ್ನಿಧಿಯಲ್ಲಿರುವ 'ಕಳ್ವರ್'ಅನ್ನು ಸಹ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ.

## ಅಳಹರ್ ಮಲೈ :

ಪಂಚಾಯುಧಧಾರಿಯಾದ ಪರಮಸ್ವಾಮಿ ಇರುವ ತಿರುಮಾಲಿರುಂಶೋಲೈಯನ್ನು 6 ಆಳ್ವಾರುಗಳು ಹಾಡಿದ್ದಾರೆ. ಅತ್ಯಂತ ಸುಂದರವಾದ ಉತ್ಸವಮೂರ್ತಿ 'ಸುಂದರಬಾಹು ಅಳಹರ್' ಇಲ್ಲಿದ್ದಾರೆ. ಈ ಕ್ಷೇತ್ರ ಒಳ್ಳೆಯ ಪರಿಸರದಿಂದ ಕೂಡಿದೆ. ನೂಪುರಗಂಗಾಸ್ನಾನ ಮತ್ತು ಪಾನ ಬಹಳ ಚೆನ್ನಾಗಿದೆ. ದೇವರ ಕೈಯಲ್ಲಿ ಪ್ರಯೋಗಚಕ್ರವಿದೆ. (ತಿರುಮೆಯ್ಯಂ ಸತ್ಯಮೂರ್ತಿ ಕೈಯಲ್ಲೂ ಇದೆ.) ಹಿಂದಿನ ಕಾಲದಲ್ಲಿ ಕಳ್ಳರು ತಾವು ದರೋಡೆ ಮಾಡಿದ್ದರಲ್ಲಿ ಸ್ವಲ್ಪ ಭಾಗ ಈ ದೇವರಿಗೆ ಸಲ್ಲಿಸುತ್ತಿದ್ದರಿಂದ 'ಕಳ್ಳಳಹರ್' ಎಂದು ಹೆಸರು ಬಂತು.

## ಯದುಶೈಲ :

ತಿರುನಾರಾಯಣಪುರವನ್ನು ನಮ್ಮಾಳ್ವಾರ್ ತಮ್ಮ ಯೋಗದೆಶೆಯಿಂದ 'ಮುಡಿತಿರುಮಾಲೈ' ಮತ್ತು 'ತಿರುನಾರಣನ್‌ತಾನ್' ಎಂದು ಸ್ತುತಿಸಿದ್ದರಿಂದ ಈ ಕ್ಷೇತ್ರವೂ ಆಳ್ವಾರ್ ಹಾಡಿದ ಕ್ಷೇತ್ರವೆಂದು ಹೇಳಲಾಗಿದೆ. ದಕ್ಷಿಣಾದಿಗಳು ಇದನ್ನು ಒಪ್ಪುವುದಿಲ್ಲ. ಆದಾಗ್ಯೂ ಇದು ದಿವ್ಯಕ್ಷೇತ್ರ. ಏಕೆಂದರೆ ಭಗವದ್ರಾಮಾನುಜರು ತಿರುನಾರಾಯಣಮೂರ್ತಿಯನ್ನು ಪ್ರತಿಷ್ಠಾಪನೆಮಾಡಿ ಹಲವಾರು ವರ್ಷಗಳು ಇಲ್ಲೇ ಇದ್ದು ಸೇವೆ ಮಾಡಿದ್ದಾರೆ. ಇದು ಇವರ ಅಭಿಮಾನಸ್ಥಳ.

ಶ್ರೀ ಪೆರಂಬೂದೂರ್, ಮಧುರಾಂತಕಂ, ಮನ್ನಾರ್‌ಗುಡಿ ಆಚಾರ್ಯರ ಇತರೆ ಅಭಿಮಾನಸ್ಥಳಗಳು.

'ಆಳ್ವಾರ್' ಪದದ ಅರ್ಥದ ಪ್ರಕಾರ, ಇತರ ದಾಸವರೇಣ್ಯರುಗಳನ್ನು ಕೂಡ ಈ ಸಂತರ ಶ್ರೇಣಿಯಲ್ಲಿ ಸೇರಿಸಬಹುದು. ಉದಾ : ಪುರಂದರ–ದಾಸರು 'ಪುರಂದರ ವಿಠಲ' ಎಂದು ಕೃಷ್ಣನ ಮೇಲೆ ಸಹಸ್ರಾರು ದೇವರನಾಮಗಳನ್ನೂ ರಚಿಸಿ ಹಾಡಿದ್ದಾರೆ. ಅಣ್ಣಮಾಚಾರ್ಯರೂ ಸಹ ಶ್ರೀನಿವಾಸನನ್ನು ಮತ್ತು ವಿಠಲನನ್ನು ಆ ರೀತಿ ಸ್ತುತಿಸಿದ್ದಾರೆ. ಕೃಷ್ಣ ಪ್ರೇಮಿಗಳಾದ ಮೀರಾ, ಚೈತನ್ಯಪ್ರಭು – ನಮ್ಮಾಳ್ವಾರರಿಗೆ ಹೋಲಿಸಬಹುದು. ಆಂಡಾಳ್–ಮೀರಾ ಒಂದೇ ನಾಣ್ಯದ ಎರಡು ಮುಖಗಳು. ಶ್ರೀರಾಮನೇ ಸರ್ವಸ್ವವೆಂದು ಪರಿಗಣಿಸಿದ್ದಾರೆ ಭದ್ರಾಚಲ ರಾಮದಾಸ್ ಮತ್ತು ತ್ಯಾಗರಾಜರು. ಸೂರ್‌ದಾಸ್, ಜ್ಞಾನೇಶ್ವರ, ಕನಕದಾಸ, ನಾರಾಯಣ ಭಟ್ಟಾತ್ತಿರಿಗಳೂ ಸಹ ಆ ಶ್ರೇಣಿಯಲ್ಲಿ ಸೇರುವಂತಹ ಮಹಾನ್ ವ್ಯಕ್ತಿಗಳು.

ಇಡೀ ದೇಶಕ್ಕೆ ರಕ್ಷಣಾಕೋಟೆಯಂತಿರುವ ಈ ಕ್ಷೇತ್ರಗಳು ನಮ್ಮ ಉದ್ಧಾರಕ್ಕಾಗಿ ಇರುವುವು. ನಮ್ಮೆಲ್ಲರ ಸುಯೋಗ ಮತ್ತು ಪುಣ್ಯ. 'ಘುಷ್ಯತೇ ಯಸ್ಯನಗರೇ ಶ್ರೀರಂಗಯಾತ್ರಾದಿನೇದಿನೇ' ಎಂಬ ಹಿತವಚನದಂತೆ, ಈ ದಿವ್ಯಕ್ಷೇತ್ರಗಳನ್ನು ಪದೇ ಪದೇ ಸಂದರ್ಶಿಸುವ ಸ್ಫೂರ್ತಿ ಮತ್ತು ಅಪೂರ್ವ ಅವಕಾಶ ನಮ್ಮದಾಗಿದೆ.

ಆಳ್ವಾರುಗಳ ಚರಣಗಳಲ್ಲಿ ಶರಣು.



# ತುಲಸೀದಾಸರು ವಿವರಿಸಿದ ಶ್ರೀರಾಮನಾಮ ಮಹಿಮೆ

ಹಿಂದೀ ಸಾಹಿತ್ಯಾಕಾಶದ ಚಂದ್ರಮನೆಂದು ಕೀರ್ತಿ ಪಡೆದ ತುಲಸೀದಾಸನು ಭಕ್ತ ಹಾಗೂ ಸಂತ ಕವಿಗಳಲ್ಲಿ ಶ್ರೇಷ್ಠನಾಗಿದ್ದಾನೆ. ಸಗುಣ ಭಕ್ತಿಯ ಪ್ರತಿಪಾದಕನಾದ ಇವನ ಪ್ರಸಿದ್ಧ ಗ್ರಂಥ–ರಾಮಚರಿತ ಮಾನಸ. ಈ ಗ್ರಂಥದಲ್ಲಿ ಕವಿಯು ರಾಮನಾಮದ ಮಹಿಮೆಯನ್ನು ಮನೋಜ್ಞವಾಗಿ ವರ್ಣಿಸಿದ್ದಾನೆ.

ರಾಮನಾಮವು ಅಗ್ನಿ, ಸೂರ್ಯ, ಚಂದ್ರರಿಗೆ ಬೀಜ ರೂಪ. ಅದು ಬ್ರಹ್ಮ, ವಿಷ್ಣು ಮತ್ತು ಶಿವರೂಪ ಈ ನಾಮವು ವೇದಗಳ ಪ್ರಾಣ; ನಿರ್ಗುಣವೂ ಉಪಮಾರಹಿತವೂ ಎನಿಸಿದೆ; ಮಾತ್ರವಲ್ಲ ಗುಣಗಳ ಭಂಡಾರವಾಗಿದೆ.

ಈ ಮಹಾ ಮಂತ್ರವನ್ನು ಶಿವನು ಜಪಿಸುತ್ತಾನೆ. ಅವನಿಂದಾಗಿ ಕಾಶಿಯು ಮುಕ್ತಿಕ್ಷೇತ್ರವೆನಿಸಿದೆ. ಗಣಪತಿಯು ರಾಮನಾಮದ ಪ್ರಭಾವದಿಂದಲೇ ಮೊದಲ ಪೂಜೆ ಪಡೆದಿದ್ದಾನೆ. ಆದಿಕವಿ ವಾಲ್ಮೀಕಿಯು ಇದರ ಮಹಿಮೆಯನ್ನು ತಿಳಿದಿದ್ದಾನೆ. ಈ ನಾಮವನ್ನು ವಿರೋಧವಾಗಿ ಉಚ್ಚರಿಸಿಯೂ ('ಮರಾ' 'ಮರಾ' ಎಂದು) ಆತನು ಪವಿತ್ರನಾದನು. ಹಿಂದು ರಾಮನಾಮವು ಸಾವಿರ ಹೆಸರುಗಳಿಗೆ ಸಮಾನವೆಂದು ಶಿವನಿಂದ ಕೇಳಿದ ಪಾರ್ವತಿಯು ಸದಾ ಪತಿಯೊಂದಿಗೆ ರಾಮನಾಮದ ಜಪಮಾಡುತ್ತಿರುತ್ತಾಳೆ. ವನಿತಾಶಿರೋಮಣಿಯಾದ ಅಂತಹ ಪಾರ್ವತಿಯನ್ನು ಶಿವನು ತನ್ನ ಅರ್ಧಾಂಗಿಯಾಗಿ ಮಾಡಿಕೊಂಡನು. ನಾಮದ ಪ್ರಭಾವವನ್ನು ಸರಿಯಾಗಿ ತಿಳಿದಿದ್ದುದರಿಂದಲೇ ಕಾಲಕೂಟವು ಅವನಿಗೆ ಅಮೃತಫಲವನ್ನು ಕೊಟ್ಟಿತು.

ರಾಮನ ಮೇಲಿನ ಭಕ್ತಿಯೆಂಬುದು ಮಳೆಗಾಲ; ಉತ್ತಮ ಸೇವಕರ ಸಮೂಹವೇ ಧಾನ್ಯ, ಮತ್ತು ರಾಮನಾಮದ ಎರಡಕ್ಷರಗಳು ಶ್ರಾವಣ ಭಾದ್ರಪದ ತಿಂಗಳುಗಳಂತಿವೆ. ಎರಡೂ ಅಕ್ಷರಗಳು ಮಧುರ ಹಾಗೂ ಮನೋಹರವಾಗಿವೆ. ಇವುಗಳು ವರ್ಣಮಾಲೆಯೆಂಬ ದೇಹಕ್ಕೆ ಎರಡು ಕಣ್ಣುಗಳಂತಿವೆ. ಭಕ್ತರೆನಿಸಿದವರೆಲ್ಲರಿಗೂ ಸ್ಮರಣೆ ಮಾಡಲು ಸುಲಭ ಮತ್ತು ಸುಖದಾಯಕವಾಗಿದೆ ಸ್ಮರಿಸುವುದರಿಂದ ಇಹದಲ್ಲಿ ಲಾಭವೂ ಪರದಲ್ಲಿ ಸದ್ಗತಿಯೂ ದೊರಕುತ್ತವೆ. ಈ ನಾಮವು ಹೇಳಲು, ಕೇಳಲು ಮತ್ತು ಸ್ಮರಿಸಲು ಸುಂದರ ಹಾಗೂ ಮಧುರವಾಗಿದೆ. ಈ ಅಕ್ಷರಗಳು ತುಲಸೀ ದಾಸನಿಗೆ ರಾಮಲಕ್ಷ್ಮಣರಂತೆ ಪ್ರಿಯವಾದುವುಗಳು. ಈ ಎರಡು ಅಕ್ಷರಗಳೂ ಜೀವ ಬ್ರಹ್ಮರಂತೆ ಹಿಂದು ಗೂಡಿರುತ್ತವೆ. ಇವೆರಡೂ ನರ-ನಾರಾಯಣರಂತೆ ಸಮಾನ ಸುಂದರ ಸಹೋದರರು ಇವು ಜಗತ್ತಿನ ಪಾಲನೆ ಮತ್ತು ರಕ್ಷಣೆ ಮಾಡುವವುಗಳು. ಇವುಗಳು ಭಕ್ತಿಯೆಂಬ ಸ್ತ್ರೀಯ ಕಿವಿಯ ಸುಂದರ ಆಭರಣಗಳು. ಜಗತ್ತಿಗೆ ಹಿತವನ್ನುಂಟು ಮಾಡುವ ನಿರ್ಮಲ ಸೂರ್ಯ ಚಂದ್ರರಂತಿವೆ. ಈ ಅಕ್ಷರಗಳು ಮೋಕ್ಷವೆಂಬ ಅಮೃತದ ರುಚಿ ಮತ್ತು ತೃಪ್ತಿಗೆ ಸಮಾನ. ಅಮೆ ಮತ್ತು ಮಹಾ ಶೇಷನಂತೆ ಜಗತ್ತಿನ ಭಾರ ಹೊರುವವುಗಳು. ಭಕ್ತರ ಮನಸ್ಸೆಂಬ ಸುಂದರ ಕಮಲದಲ್ಲಿ ವಿಹರಿಸುವ ತುಂಬಿಗಳಂತಿವೆ. ನಾಲಿಗೆಯೆಂಬ ಯಶೋದಾದೇವಿಗೆ ಶ್ರೀಕೃಷ್ಣ ಬಲರಾಮರಂತೆ ಪ್ರೀತಿ ಪಾತ್ರವಾಗಿವೆ.

ವಿಚಾರಿಸಿ ನೋಡಿದರೆ 'ನಾಮ' ಮತ್ತು 'ನಾಮಿ' ಎರಡೂ ಹಿಂದೇ. ಆದರೆ ಎರಡರಲ್ಲಿಯೂ ಪ್ರಭು ಸೇವಕರಲ್ಲಿರುವಂತಹ ಪ್ರೀತಿಯಿದೆ. (ಅಂದರೆ ಶ್ರೀರಾಮನು ತನ್ನ ಹೆಸರನ್ನು ಹೇಳಿದೊಡನೆಯೇ ಅಲ್ಲಿಗೆ ಬರುತ್ತಾನೆ) ನಾಮ ಮತ್ತು ರೂಪ ಎರಡೂ ದೇವರ ಉಪಾಧಿ. ಇವೆರಡೂ ಅನಿರ್ವಚನೀಯ, ಅನಾದಿ ಮತ್ತು ಸುಂದರವಾಗಿವೆ. ಬುದ್ಧಿಯಿಂದ ಮಾತ್ರ ಇವರ ಸ್ವರೂಪ ತಿಳಿದು ಕೊಳ್ಳಲು ಬರುತ್ತದೆ. ರೂಪವು ನಾಮದ ಅಧೀನದಲ್ಲಿ ನೋಡಲ್ಪಡುತ್ತದೆ; ನಾಮದ ಹೊರತು ರೂಪವನ್ನು ನೋಡಲಾಗುವುದಿಲ್ಲ. ಹೆಸರನ್ನು ತಿಳಿಯದೆ ಯಾವುದೇ ವಿಶೇಷವಸ್ತುವನ್ನು ಅಂಗೈಯಲ್ಲಿಟ್ಟರೂ ಗುರುತಿಸಲು ಸಾಧ್ಯವಿಲ್ಲ. ರೂಪವಿಲ್ಲದೆ ನೋಡಿದರೂ ನಾಮದ ಸ್ಮರಣೆ ಮಾಡಲ್ಪಟ್ಟರೆ ಬಹಳ ಪ್ರೇಮದಿಂದ ಆ ರೂಪ ಹೃದಯದಲ್ಲಿ ಮೂಡುತ್ತದೆ. ನಿರ್ಗುಣ ಮತ್ತು ಸಗುಣದ ನಡುವೆ ನಾಮವೆಂಬುದು ಹಿಂದು ಸುಂದರ ಸಾಕ್ಷಿಯಾಗಿದೆ. ನಾಮವು ನಿರ್ಗುಣ, ಸುಗುಣಗಳ ಯಥಾರ್ಥ ಜ್ಞಾನವನ್ನು ಮಾಡಿಕೊಡುವಂತಹ ಚತುರ ದ್ವಿಭಾಷಿಯೆನ್ನ ಬಹುದು.

ಯಾವನು ಹಿಳಗೂ ಹೊರಗೂ ಬೆಳಕನ್ನ ಬಯಸುತ್ತಾನೋ ಅವನು ತನ್ನ ನಾಲಿಗೆಯೆಂಬ ಹೊಸ್ತಿಲಲ್ಲಿ ರಾಮನಾಮದ ರತ್ನ ದೀಪವನ್ನಿಡಬೇಕೆಂದು ತುಲಸೀದಾಸನು ಹೇಳುತ್ತಾನೆ.

ಲೌಕಿಕ ಸಿದ್ಧಿ ಬಯಸುವ ಸಾಧಕರು ಪ್ರೀತಿಯಿಂದ ಜಪಮಾಡಿ ಅಣಿಮಾದಿ ಅಷ್ಟ ಸಿದ್ಧಿಗಳನ್ನು ಪಡೆದು ಸಿದ್ಧರಾಗುತ್ತಾರೆ. ಆರ್ತ ಭಕ್ತರು ನಾಮ ಜಪಮಾಡಿ ತಮ್ಮ ದೊಡ್ಡ ದೊಡ್ಡ ಕಷ್ಟಗಳನ್ನು ನಿವಾರಿಸಿಕೊಳ್ಳುತ್ತಾರೆ. ಪರಮಾತ್ಮನ ಗೂಢರಹಸ್ಯವನ್ನು ತಿಳಿಯಲಪೇಕ್ಷಿಸುವವರು (ಜಿಜ್ಞಾಸುಗಳು) ಕೂಡ ನಾಲಗೆಯಿಂದ ಹೆಸರನ್ನು ಜಪಿಸಿ ಅದನ್ನು ತಿಳಿಯುತ್ತಾರೆ. ಬ್ರಹ್ಮ ನಿರ್ಮಿತವಾದ ಈ ಪ್ರಪಂಚವನ್ನು ಬಿಟ್ಟು ವೈರಾಗ್ಯ ಹೊಂದಿದ ಮುಕ್ತ ಯೋಗಿ ಈ ನಾಮವನ್ನು ಜಪಿಸಿ ಎಚ್ಚರ ಹೊಂದುತ್ತಾನೆ ಮತ್ತು ನಾಮರೂಪ ರಹಿತವಾದ ಅನಿರ್ವಚನೀಯ ಬ್ರಹ್ಮ ಸುಖದ ಅನುಭವ ಪಡೆಯುತ್ತಾನೆ. ಹೀಗೆ ನಾಲ್ಕು ವರ್ಗದ ಭಕ್ತರಿಗೂ ಈ ನಾಮವೇ ಆಧಾರ. ಇವರಲ್ಲಿ ಜ್ಞಾನೀ

ಶ್ರೀ ಎಸ್. ಆರ್. ಪಾಡಿ

ಭಕ್ತರೇ ದೇವರಿಗೆ ವಿಶೇಷಪ್ರಿಯ. ಹೀಗೆ ನಾಲ್ಕು ಯುಗಗಳಲ್ಲಿಯೂ, ನಾಲ್ಕು ವೇದಗಳಲ್ಲಿಯೂ ನಾಮದ ಪ್ರಭಾವವಿದೆ. ಆದರೆ ಕಲಿಯುಗದಲ್ಲಿ ನಾಮವನ್ನು ಬಿಟ್ಟು ಬೇರೆ ಉಪಾಯವಿಲ್ಲ. ಯಾರು ಎಲ್ಲಾ ತರದ ಕಾಮನೆಗಳಿಂದ (ಭೋಗ ಮತ್ತು ಮೋಕ್ಷ ಕೂಡಾ) ರಹಿತ ಮತ್ತು ಶ್ರೀರಾಮಭಕ್ತಿ ರಸದಲ್ಲಿ ಲೀನರಾಗಿದ್ದರೋ ಅವರು ನಾಮದ ಸುಂದರ ಪ್ರೇಮವೆಂಬ ಅಮೃತ ಸರೋವರದಲ್ಲಿ ತಮ್ಮ ಮನವನ್ನು ಮೀನಾಗಿಸುತ್ತಾರೆ. (ಅಂದರೆ ಅವರು ನಾಮಾಮೃತವನ್ನು ನಿರಂತರ ಆಸ್ವಾದಿಸುತ್ತಿರುತ್ತಾರೆ. ಒಂದುಕ್ಷಣ ಕೂಡಾ ಅವರಿಂದ ಬೇರಾಗಲು ಬಯಸುವುದಿಲ್ಲ).

ರಾಮ ನಾಮವು ನಿರ್ಗುಣ ಮತ್ತು ಸಗುಣ ಬ್ರಹ್ಮ ಎಂಬ ಎರಡೂ ರೂಪಗಳ ಪ್ರತೀಕವಾಗಿದೆ. ಇವೆರಡೂ ಅನಾದಿ ಹಾಗೂ ಅನುಪಮ. ತುಲಸೀದಾಸನ ಅಭಿಪ್ರಾಯದಂತೆ ಎರಡರಲ್ಲಿಯೂ ನಾಮ ದೊಡ್ಡದು. ನಾಮವು ತನ್ನ ಶಕ್ತಿಯಿಂದ ಎರಡನ್ನೂ ವಶದಲ್ಲಿಟ್ಟುಕೊಂಡಿದೆ. ನಿರ್ಗುಣ ಮತ್ತು ಸಗುಣವೆಂಬ ಎರಡು ರೀತಿಯ ಬ್ರಹ್ಮ ಜ್ಞಾನವೂ ಅಗ್ನಿಯಂತೆ. ನಿರ್ಗುಣವು ಕಟ್ಟಿಗೆಯೊಳಗಿರುವ ಅಪ್ರಕಟಿತ ಅಗ್ನಿಯಂತೆ ಕಾಣುವುದಿಲ್ಲ. ಆದರೆ ಸಗುಣವು ಪ್ರಕಟಿತ ಅಗ್ನಿಯಂತೆ–ಅದು ಪ್ರತ್ಯಕ್ಷ ಕಾಣುತ್ತದೆ. (ತತ್ತ್ವತಃ ಎರಡೂ ಒಂದೇ. ಕೇವಲ ಪ್ರಕಟ, ಅಪ್ರಕಟದ ಭೇದದಿಂದ ಬೇರೆ ಬೇರೆ ಎಂದು ಕಾಣುತ್ತದೆ. ಹೀಗೆಯೇ ನಿರ್ಗುಣ ಮತ್ತು ಸಗುಣ ತತ್ತ್ವತಃ ಒಂದೇ ಆಗಿವೆ). ಹೀಗಿದ್ದರೂ ಎರಡೂ ತಿಳಿಯಲು ಬಹು ಕಠಿಣವಾಗಿವೆ. ಆದರೆ ನಾಮದಿಂದ ತಿಳಿಯಲು ಸುಲಭವಾಗುತ್ತವೆ. ಇದರಿಂದಲೇ ತುಲಸೀದಾಸನು ನಿರ್ಗುಣ ಬ್ರಹ್ಮನಿಂದ ಮತ್ತು ಸಗುಣ ರಾಮನಿಂದ ನಾಮವೇ ದೊಡ್ಡದು ಎಂದು ಹೇಳುತ್ತಾನೆ.

ಮುಂದೆ ತುಲಸೀದಾಸನು ರಾಮನಾಮವು ರಾಮನಿಗಿಂತಲೂ ದೊಡ್ಡದು ಎಂಬುದನ್ನು ಸಕಾರಣವಾಗಿ ಸಮರ್ಥಿಸುತ್ತಾನೆ. ಶ್ರೀರಾಮನು ಋಷಿಪತ್ನಿಯಾದ ಒಬ್ಬಳು ಅಹಲ್ಯೆಯನ್ನು ಉದ್ಧರಿಸಿದರೆ, ನಾಮವು ಕೋಟಿಗಟ್ಟಲೆ ದುಷ್ಟರ ಕೆಡುಕು ಬುದ್ಧಿಯನ್ನು ಉದ್ಧರಿಸಿತು. ರಾಮನು ವಿಶ್ವಾಮಿತ್ರನ ಹಿತಕ್ಕಾಗಿ ಸುಕೇತು ಪುತ್ರಿಯಾದ ತಾಟಕಿಯನ್ನು ಅವಳ ಮಗನ ಸಮೇತ ಕೊಂದರೆ, ನಾಮವು ತನ್ನ ಭಕ್ತರ ದೋಷ, ದುಃಖ, ದುರಾಸೆಗಳನ್ನು ಸೂರ್ಯನು ರಾತ್ರಿಯನ್ನು ನಾಶ ಮಾಡುವಂತೆ ನಾಶಪಡಿಸಿತು. ಶ್ರೀರಾಮನು ಸ್ವತಃ ಶಿವನ ಬಿಲ್ಲನ್ನು ಮುರಿದನು. ಆದರೆ ನಾಮದ ಪ್ರತಾಪವು ಸಂಸಾರದ ಎಲ್ಲಾ ಭಯಗಳನ್ನು ನಾಶಪಡಿಸುವಂತಹದಾಗಿದೆ ಶ್ರೀರಾಮನು ದಂಡಕ ವನವನ್ನು ಸುಂದರವಾಗಿ ಮಾಡಿದನು; ನಾಮವು ಅಸಂಖ್ಯ ಜನರ ಮನಸ್ಸುಗಳನ್ನು ಪವಿತ್ರಗೊಳಿಸಿತು. ರಾಮನು ರಾಕ್ಷಸ ಸಮೂಹವನ್ನು ನಾಶಪಡಿಸಿದನು; ನಾಮವು ಕಲಿಯುಗದ ಎಲ್ಲಾ ಪಾಪಗಳನ್ನು ಬೇರು ಸಹಿತ ಕಿತ್ತುಹಾಕಿತು. ಶ್ರೀರಾಮನು ಶಬರಿ, ಜಟಾಯು ಮೊದಲಾದ ಉತ್ತಮ ಸೇವಕರಿಗೆ ಮುಕ್ತಿಯನ್ನು ಕೊಟ್ಟನು. ನಾಮವು ಅಗಣಿತ ದುಷ್ಟರ ಉದ್ಧಾರ ಮಾಡಿತು. ನಾಮದ ಗುಣಗಳ ಕಥೆ ವೇದಗಳಲ್ಲಿ ಪ್ರಸಿದ್ಧವಾಗಿದೆ. ಶ್ರೀರಾಮನು ಸುಗ್ರೀವ, ವಿಭೀಷಣ ಇಬ್ಬರನ್ನೇ ತನ್ನ ಆಶ್ರಯಕ್ಕೆ ತೆಗೆದುಕೊಂಡನು; ಆದರೆ ನಾಮವು ಅನೇಕ ಬಡವರ ಮೇಲೆ ಕೃಪೆದೋರಿತು. ರಾಮನು ಕರಡಿ ಕಪಿಗಳ ಸೈನ್ಯ ಕೂಡಿಸಿ ಸಮುದ್ರಕ್ಕೆ ಸೇತುವೆ ರಚಿಸಲು ತುಂಬಾ ಪ್ರಯತ್ನಪಟ್ಟನು. ಆದರೆ ನಾಮವನ್ನುಚ್ಚರಿಸಿದ ಕೂಡಲೇ ಸಂಸಾರ ಸಮುದ್ರವು ಬತ್ತಿ ಹೋಯಿತು.

ನಾರದನು ರಾಮನಾಮದ ಪ್ರತಾಪವನ್ನು ತಿಳಿದಿದ್ದಾನೆ. ಹರಿ ಎಲ್ಲಾ ಜಗತ್ತಿಗೆ ಪ್ರಿಯನು. ಹರಿಗೆ ಹರ ಪ್ರಿಯನು. ನಾರದನು ಹರಿ ಹರರಿಬ್ಬರಿಗೂ ಪ್ರಿಯನು. ಹರಿನಾಮ ಜಪಿಸಿದ್ದರಿಂದ ಪ್ರಹ್ಲಾದನು ಭಕ್ತಶಿರೋಮಣಿಯಾದನು. ಧ್ರುವನು ಚಿಕ್ಕಮ್ಮನ ಮಾತಿನಿಂದ ದುಃಖಿತನಾಗಿ ಹರಿನಾಮವನ್ನು ಜಪಿಸಿ, ಅದರ ಶಕ್ತಿಯಿಂದ ಶ್ರೇಷ್ಠ ಸ್ಥಾನವನ್ನು ಪಡೆದನು. ಹನುಮಂತನು ಈ ಪವಿತ್ರನಾಮಸ್ಮರಣೆ ಮಾಡಿ ಶ್ರೀರಾಮನನ್ನೇ ತನ್ನ ವಶದಲ್ಲಿಟ್ಟುಕೊಂಡನು. ಅಜಾಮಿಳ, ಆನೆ ಮತ್ತು ವೇಶ್ಯೆಕೂಡಾ ಶ್ರೀಹರಿಯ ನಾಮದ ಪ್ರಭಾವದಿಂದ ಮುಕ್ತಿ ಹೊಂದಿದರು. "ನಾಮದ ಮಹಿಮೆಯನ್ನು ಎಷ್ಟೆಂದು ಹೇಳಲಿ? ರಾಮನು ಕೂಡಾ ನಾಮದ ಗುಣಗಾನ ಮಾಡಲು ಅಸಮರ್ಥನು'' ಎನ್ನುತ್ತಾನೆ ಕವಿ ತುಲಸೀದಾಸ.

ಕಲಿಯುಗದಲ್ಲಿ ರಾಮನಾಮವು ಕಲ್ಪತರು ಮತ್ತು ಮುಕ್ತಿಧಾಮವಾಗಿದೆ. ಅದರ ಸ್ಮರಣೆಯಿಂದ ನಿಕೃಷ್ಟನಾದ ತುಲಸೀದಾಸನು ತುಲಸಿಯಂತೆ ಶ್ರೇಷ್ಠನಾದನು ಎನ್ನುತ್ತಾನೆ. ನಾಲ್ಕುಯುಗ, ಮೂರು ಕಾಲ ಮತ್ತು ಮೂರು ಲೋಕಗಳಲ್ಲಿಯೂ ನಾಮವನ್ನು ಜಪಿಸಿ ಜೀವಿಗಳು ಶೋಕರಹಿತರಾಗಿದ್ದಾರೆ ಶ್ರೀರಾಮನಾಮದಲ್ಲಿ ಪ್ರೇಮವನ್ನಿಡುವುದೇ ಸಮಸ್ತ ಪುಣ್ಯಗಳ ಫಲವೆಂದು ವೇದಪುರಾಣ ಹಾಗೂ ಸಂತರ ಅಭಿಪ್ರಾಯವಾಗಿದೆ. ಮೊದಲಿನಸತ್ಯಯುಗದಲ್ಲಿ ಧ್ಯಾನದಿಂದಲೂ, ಎರಡನೆಯ ತ್ರೇತಾಯುಗದಲ್ಲಿ ಯಜ್ಞದಿಂದಲೂ, ದ್ವಾಪರಯುಗದಲ್ಲಿ ಪೂಜಿಸುವುದರಿಂದಲೂ ದೇವರು ಸಂತುಷ್ಟನಾಗುತ್ತಾನೆ. ಕಲಿಯುಗದಲ್ಲಾದರೋ ನಾಮವೇ ಕಲ್ಪವೃಕ್ಷವಾಗಿದೆ. ಸ್ಮರಿಸಿದ ಕೂಡಲೇ ಸಂಸಾರದ ಎಲ್ಲಾ ಮಾಯಾಜಾಲಗಳನ್ನು ಅದು ನಾಶಪಡಿಸುತ್ತದೆ. ಹೀಗೆ ಕಲಿಯುಗದಲ್ಲಿ ಈ ರಾಮನಾಮವು ಮನೋವಾಂಛಿತ ಫಲವನ್ನು ಕೊಡುತ್ತದೆ.

ಪ್ರೇಮದಿಂದಾಗಲಿ, ವೈರದಿಂದಾಗಲಿ ಅಥವಾ ಆಲಸ್ಯದಿಂದ-ಹೀಗೆ ಯಾವುದೇ ರೀತಿಯಲ್ಲಿ ನಾಮವನ್ನು ಜಪಿಸುವುದರಿಂದ ಹತ್ತೂ ದಿಕ್ಕುಗಳಲ್ಲಿ ಕಲ್ಯಾಣವಾಗುವುದು. ಅಂತಹ ರಾಮನಾಮದ ಸ್ಮರಣೆಮಾಡಿ, ರಾಮನಿಗೆ ವಂದಿಸಿ ಅತನ ಗುಣಗಳ ವರ್ಣನೆಯನ್ನು ತಾನು ಮಾಡುತ್ತೇನೆ ಎಂದು ಭಕ್ತಿಯಿಂದ ಹೃದಯ ತುಂಬಿ ಹಾಡಿದ್ದಾನೆ ತುಲಸೀದಾಸ.

★

# ಶ್ರೀ ಧೀರೇಂದ್ರಯತಿಗಳು

ಧರಣೀ ಮಂಡಲೇ ಖ್ಯಾತಂ ........
ಧುಯ್ಯಾದಿ ಗುಣ ಬೃಂಹಿತಂ ।
ಧಿಃಕೃತಾ ಶೇಷವಾದೀಭಂ
ಧೀರಸಿಂಹ ಗುರುಂ ಭಜೇ ॥

ಫಾಲ್ಗುಣ ಮಾಸದ ಪವಿತ್ರತೆ ಏನೋ ನಾನರಿಯೆ. ಪ್ರಾಣ ಪಂಚಕದಂತಿರುವ ಪಂಚ ಶ್ರೇಷ್ಠಯತಿ ಶಿರೋಮಣಿಗಳಾದ ಶ್ರೀ ಚಂದ್ರಿಕಾಚಾರ್ಯರು, ಶ್ರೀ ವಾದಿರಾಜರು, ಶ್ರೀ ಸುಧೀಂದ್ರರು, ಶ್ರೀ ಸತ್ಯಬೋಧರಾಯರು ಹಾಗೂ ಪ್ರಕೃತ ಚರಿತ್ರರಾದ ಶ್ರೀ ಧೀರೇಂದ್ರರು–ಸಜ್ಜನಗಳನ್ನು ಅನುಗ್ರಹಿಸಲೋಸುಗ ವೃಂದಾವನದಲ್ಲಿ ನೆಲಸಿದರು. ಇದನ್ನು ಗಮನಿಸಿದರೆ ಎಲ್ಲಾ ಮಠಾಧಿಪತಿಗಳಲ್ಲಿ ಆಗ್ಗೆ ಹೇಗೆ ಸೌಹಾರ್ದ ಇತ್ತೆಂಬುದು ಅಭಿವ್ಯಕ್ತವಾಗುತ್ತಲಿದೆ. ಈ ಮೇಲೆ ನಿರೂಪಿತವಾಗಿರುವ ಯತಿಶ್ರೇಷ್ಠರುಗಳಲ್ಲಿ ಶ್ರೀ ಧೀರೇಂದ್ರರ ಸಚ್ಚರಿತ್ರೆ ಅನೇಕರಿಗೆ ಅಷ್ಟಾಗಿ ತಿಳಿಯದು. ಆದ್ದರಿಂದ ಅಂತಹ ಅಪರೂಪ ಅಪರೋಕ್ಷ ಜ್ಞಾನಿಗಳ ಅರಿವು ಎಲ್ಲರಿಗೂ ಸಾಕಷ್ಟು ಆಗಬೇಕಿದೆ.

ಶ್ರೀ ಧೀರೇಂದ್ರರು ಶ್ರೀರಾಘವೇಂದ್ರಸ್ವಾಮಿಗಳವರ ಮಠದ ಪೀಳಿಗೆಯಲ್ಲಿ ರಾಯರ ನಂತರ ಆರನೆಯವರು. ರಾಘವೇಂದ್ರರು, ಯೋಗೀಂದ್ರರು, ವಾದೀಂದ್ರರು, ವಸುಧೇಂದ್ರರು, ವರದೇಂದ್ರರು, ಭುವನೇಂದ್ರರು, ಧೀರೇಂದ್ರರು – ಹೀಗೆ ಕ್ರಮ. ಇವರು ಆಸೇತು ಬದರಿಕಾಶ್ರಮ ಪರ್ಯಂತ ಸಂಚರಿಸಿ ವಿದ್ವತ್ ಪ್ರಭೆಯಿಂದ ದ್ವೈತ ದುಂದುಭಿಯನ್ನು ಎಲ್ಲೆಡೆ ಮೊಳಗಿಸಿದ ಧೀರರು. ಇವರು ಸಾಮಾನ್ಯರಲ್ಲ ರಾಘವೇಂದ್ರರ ಪೂರ್ವಾಶ್ರಮ ವಂಶಜರು. ಅವರ ಮೊಮ್ಮಕ್ಕಳಾದ ವಾದೀಂದ್ರರ ಸಾಕ್ಷಾತ್ ಮಕ್ಕಳೇ ಆಗ ಜಯರಾಮಾಚಾರ್ಯ ಎಂಬ ಅಭಿದಾನದಿಂದ ತರ್ಕ, ವ್ಯಾಕರಣ, ವೇದಾಂತ, ನ್ಯಾಯ, ಮೀಮಾಂಸಾದಿ ಸಕಲ ಶಾಸ್ತ್ರಗಳನ್ನೂ ತಂದೆಯಲ್ಲೇ ಚೆನ್ನಾಗಿ ಅಧ್ಯಯನ ಮಾಡಿ ಉದ್ದಾಮ ಪಂಡಿತರಾದರು. ಗುರುಗಳ ಆಜ್ಞಾ ಪ್ರಕಾರ ಗೃಹಸ್ಥಾಶ್ರಮ ಸ್ವೀಕರಿಸಿ ಮೂರು ಗಂಡು ಒಂದು ಹೆಣ್ಣು ಮಗುವನ್ನು ಪಡೆದರು. ಆ ಹೊತ್ತಿಗೆ ವಾದೀಂದ್ರರು ಹರಿಪುರ ಪ್ರವೇಶಿಸಲು ಅವರ ವೃಂದಾವನವನ್ನು ಮಂತ್ರಾಲಯದಲ್ಲಿ ರಾಘವೇಂದ್ರ ಸ್ವಾಮಿಗಳ ಮೂಲ ವೃಂದಾವನದ ಎಡ ಪಕ್ಕದಲ್ಲೇ ನೆರವೇರಿಸಲಾಯಿತು. ಆ ವೃಂದಾವನ ರಚನೆ ಬಗ್ಗೆ ವಿಸ್ತಾರ ಚರಿತ್ರೆಯೇ ಇದೆ. ಪ್ರಕೃತ ವಿಷಯಕ್ಕೆ ಸಂಬಂಧಿಸದ ಕಾರಣ ಇಲ್ಲಿ ಉಲ್ಲೇಖಿಸಲಿಲ್ಲ.

ವಾದೀಂದ್ರರ ನಂತರ ವಸುಧೇಂದ್ರರು ವೇದಾಂತ ಸಿಂಹಾಸನದಲ್ಲಿ ವಿರಾಜಿಸಿದರು. ತಂದೆ ಹಾಗೂ ಗುರುಗಳ ದೇಹತ್ಯಾಗದಿಂದ ಅತ್ಯಂತ ನೊಂದು ವಿರಕ್ತರಾದ ಜಯರಾಮಾಚಾರ್ಯರು ತೀರ್ಥಯಾತ್ರೆ ಕೈಗೊಂಡು ಬಹುಕಾಲ ಅಗೋಚರರಾಗಿ ಸಂಚರಿಸಿದರು. ವಸುಧೇಂದ್ರರಿಗೆ ಉತ್ಕ್ರಮಣಕಾಲ ಸನ್ನಿಹಿತವಾಗಲು ಪೂರ್ವಾಶ್ರಮದ ತಮ್ಮಂದಿರಿಗೆ ಆಶ್ರಮವಿತ್ತು ವರದೇಂದ್ರರೆಂದು ಕರೆದರು. ಅವರು ವ್ಯಾಸದಾಸ ಸಾಹಿತ್ಯಕ್ಕೆ ಬಹು ಉತ್ತೇಜನವಿತ್ತರು. ಆ ಹೊತ್ತಿಗೆ ರಾಮಶಾಸ್ತ್ರಿ ಪ್ರಭುಣೆ ಎಂಬ ಭಾರಿ ಪಂಡಿತನು ಶ್ರೀಗಳನ್ನು ಪೂನಾದಲ್ಲಿ ವಾದಕ್ಕೆ ಆಹ್ವಾನಿಸಲಾಗಿ, ಇದನ್ನರಿತ ಸಂಚಾರದಲ್ಲಿದ್ದ ಜಯರಾಮಾಚಾರ್ಯರು ಪುಣೆಗೆ ಆಗಮಿಸಿ ವಾದಿ ನಿಗ್ರಹಮಾಡಿ ಕೀರ್ತಿಗಳಿಸಿ ಸಂಚಾರ ನಿಮಿತ್ತ ಕುಂಭಕೋಣಕ್ಕೆ ಬಂದರು. ಅಲ್ಲಿ ಸ್ವಪ್ನ ಸೂಚನೆಯಾಗಲು ಮಹಾನುಭಾವರಾದ 64 ವಿದ್ಯೆಯಲ್ಲೂ ಪೂರ್ಣ ಪಂಡಿತರಾಗಿದ್ದ ರಾಘವೇಂದ್ರರ ಪರಮ ಗುರುಗಳಾದ ವಿಜಯೀಂದ್ರರ ಸನ್ನಿಧಿಯಲ್ಲಿ ಆಶ್ರಮ ಸ್ವೀಕರಿಸಿ ಶ್ರೀ ಧೀರೇಂದ್ರತೀರ್ಥರೆನಿಸಿದರು.

ಭುವನೇಂದ್ರರು ಧೀರೇಂದ್ರರಿಗೆ ಸಂಸ್ಥಾನವನ್ನು ಒಪ್ಪಿಸಲು ಪರಮ ವೈರಾಗ್ಯ ಮೂರ್ತಿಗಳಾದ ಧೀರೇಂದ್ರರು ಕೆಲವುಕಾಲ ಶ್ರೀರಾಮದೇವರನ್ನು ಅರ್ಚಿಸಿ ನಂತರ ಭುವನೇಂದ್ರರಿಗೇ ಬಿಟ್ಟುಕೊಟ್ಟರು. ಭುವನೇಂದ್ರರು ಧೀರೇಂದ್ರರಲ್ಲಿ ಶಾಸ್ತ್ರಾಧ್ಯಯನ ಪ್ರಾರಂಭಿಸಿದರು. ಒಮ್ಮೆ ಸಂಚಾರ ನಿಮಿತ್ತ ಹಾವೇರಿ ತಾಲೂಕಿನ ರಿತ್ತಿ ಗ್ರಾಮಕ್ಕೆ ಬಂದರು; ವರದಾನದಿಯ ಪಾತ್ರದಲ್ಲಿ ಪ್ರಶಾಂತ ವಾತಾವರಣದಲ್ಲಿ ನೆಲೆಸಲು ಇಚ್ಛಿಸಿ ಒಬ್ಬ ವೀರಶೈವನಿಂದ ಜಾಗಪಡೆದು ರಿತ್ತಿಯಲ್ಲಿ ವರದಾಪಾತ್ರದಲ್ಲಿ ಶ್ರೀಗಳು ನೆಲೆಸಿದರು. ಅಲ್ಲಿಗೆ ಶ್ರೀ ಮುತ್ತರಾಧಿ ಮಠಾಧೀಶರಾಗಿದ್ದ ಶ್ರೀ ಸತ್ಯಬೋಧರು ಆಗಮಿಸಿದ್ದರು. ಶ್ರೀ ವಿಷ್ಣುತೀರ್ಥರೂ ಹಾಗೂ ಜಗನ್ನಾಥದಾಸರೂ ಅಲ್ಲಿಗೆ ಆಗಮಿಸಿ ಶ್ರೀಹರಿ ಕಥಾಮೃತಸಾರ ಗ್ರಂಥ ಅಲ್ಲಿ ರಚಿಸಿದರೆಂಬ ಪ್ರತೀತಿಯೂ ಕೆಲವರಲ್ಲಿದೆ. ಹೀಗೆ ಧೀರೇಂದ್ರರು ಸದಾ ವಿದ್ಯಾ ಪ್ರೋತ್ಸಾಹದಲ್ಲೇ ಕಾಲಯಾಪನೆ ಮಾಡುತ್ತಾ ತಪಸ್ಸಿನಿಂತ ಕಾಲಕಳೆದ ಮಹಾಮಹಿಮರು.

ಇವರ ರಚಿಸಿದ ಗ್ರಂಥಗಳು ಈರೀತಿ ಇವೆ:

1. ಕಾರಕವಾದ (ಇದು ಅಪ್ರಕಟಿತ ಅಮುದ್ರಿತ ಗ್ರಂಥ)
2. ಮನ್ಯುಸೂಕ್ತ (ಹರಿಪರವಾಗಿ ವ್ಯಾಖ್ಯಾನ ಮಾಡಿರುತ್ತಾರೆ)
3. ನಾರಾಯಣೋಪನಿಷದ್ ವ್ಯಾಖ್ಯಾನ (ಮುದ್ರಿತ ಆದರೆ ಈಗ ಅನುಪಲಬ್ಧ)
4. ಬಳಿತ್ಥಾ ಸೂಕ್ತಕ್ಕೆ ಉತ್ತಮ ವ್ಯಾಖ್ಯಾನ
5. ವಾಜಸನೇಯೋಪನಿಷತ್ ವ್ಯಾಖ್ಯಾನ
6 ಐತರೇಯೋಪನಿಷತ್ ವ್ಯಾಖ್ಯಾನ
7. ವಿಷಯ ವಾಕ್ಯಾರ್ಥ ಸಂಗ್ರಹ
8. ಗುರುಗುಣಸ್ತವನ–ಮೊದಲಾದವು

ಈಗ ಧೀರೇಂದ್ರ ತೀರ್ಥರು . ಮನ್ಯುಸೂಕ್ತಕ್ಕೆ ಶ್ರೀನರಸಿಂಹದೇವರ ಪರವಾಡಿದ ವ್ಯಾಖ್ಯಾನ ಕ್ರಮವನ್ನು ಗಮನಿಸಿದಾಗ ಅವರ ಅಪಾರ ಜ್ಞಾನದ ಮಹತ್ವವು ವಿಶೇಷವಾಗಿ ಅಭಿವ್ಯಕ್ತವಾಗುತ್ತದೆ

ಈ ಮನ್ಯುಸೂಕ್ತವು ಋಗ್ವೇದದ ಹತ್ತನೆಯ ಮಂಡಲದ 83 ಹಾಗೂ 84 ನೆಯ ಸೂಕ್ತಿ. ಅಷ್ಟಕ 8ನೆ ಅಧ್ಯಾಯ 32, 18–19 ನೆಯ ವರ್ಗದ್ದು. 'ಯಸ್ತೇಮನ್ಯೋ ಽಶ್ವಯಾ ಮನ್ಯೋ' ಇತ್ಯಾದಿ 14 ಋಕ್‌ಗಳುಳ್ಳ ಈ ಸೂಕ್ತಕ್ಕೆ ತಾಪಸ ಪುತ್ರನಾದ ಮನ್ಯುವೇ ಋಷಿಯು, ಮನ್ಯು ಎಂಬ ಹೆಸರುಳ್ಳ, ಮನ್ಯುವಿನಲ್ಲಿ ಅಂತರ್ಗತನಾದ ಶ್ರೀ ನರಸಿಂಹದೇವರೇ ಇದಕ್ಕೆ ಮುಖ್ಯ ಪ್ರತಿಪಾದ್ಯ ದೇವತೆ ಎಂದು ಚಮತ್ಕಾರವಾಗಿ ಶ್ರೀಗಳು ತೋರಿಸಿರುವುದನ್ನು ಗಮನಿಸಬಹುದಾಗಿದೆ.

ಯಸ್ತೇ ಮನ್ಯೋಽವಿಧದ್ವಜ್ರ ಸಾಯಕ ಸಹ
ಓಜಃ ಪುಷ್ಯತಿ ವಿಶ್ವಮಾನುಷಕ್ ।
ಸಾಹ್ಯಾಮ ದಾಸಮಾರ್ಯಂ ತ್ವಯಾ
ಯುಜಾ ಸಹಸ್ಕೃತೇನಸಹಸಾ ಸಹಸ್ವತಾ ॥

ಈ ಋಕ್ಕಿಗೆ ನಾನಾ ರೀತಿ ವ್ಯಾಖ್ಯಾನಾದಿಗಳನ್ನು ತರಂಗ ತರಂಗವಾಗಿ ತೋರಿಸುತ್ತಾ ಹಂಪರ

ಶ್ರೀ ಚಿಂಚೋಳಿ ಪ್ರಹ್ಲಾದಾಚಾರ್ಯ

ಅರ್ಥಮಾಡಿದರು ಈ ಋಕ್ಕಿನ ಮುಖ್ಯ ತಾತ್ಪರ್ಯ ಹೀಗಿದೆ :

ಶ್ರೀಲಕ್ಷ್ಮೀನರಸಿಂಹನು ವಜ್ರದಂತಿರುವ ನಂದಕವೆಂಬ ಖಡ್ಗವನ್ನೂ ಬಾಣವನ್ನೂ ಹಿಡಿದುಕೊಂಡಿರುತ್ತಾನೆ. ಅವನು ಕ್ರೋಧಾಭಿಮಾನಿಯಾದ ರುದ್ರನಲ್ಲಿಯೂ ಕ್ರತು ಅಂದರೆ ಯಾಗಗಳಿಗೆ ಅಭಿಮಾನಿಯಾದ ಇಂದ್ರನಲ್ಲಿಯೂ ಅಂತರ್ಗತನಾದುದರಿಂದ ಅವನಿಗೆ ಮನ್ಯು ಎಂದು ಹೆಸರು. ಇಂತಹ ಲಕ್ಷ್ಮೀನರಸಿಂಹ ಸ್ವಾಮಿಯೇ, ನಿನ್ನ ಬಲ ಮತ್ತು ಪ್ರಭಾವಗಳು ಸಮಸ್ತ ಪ್ರಪಂಚಗಳನ್ನೂ ವ್ಯಾಪಿಸಿಕೊಂಡಿವೆ, ಮತ್ತು ಪ್ರಪಂಚವನ್ನು ಪೋಷಿಸುತ್ತಲೂ ಇವೆ. ಹೇ ಸ್ವಾಮಿ, ನೀನು ಮಹಾಬಲಶಾಲಿ ಹಾಗೂ ಸಹನಶಕ್ತಿವುಳ್ಳವನು. ಎಲ್ಲರಿಗೂ ಬಲಪ್ರದನು, ನಮ್ಮ ಸಾಮರ್ಥ್ಯವೆಲ್ಲವೂ ನಿನ್ನ ಅನುಗ್ರಹದಿಂದಲೇ ಕಾರ್ಯಕಾರಿಯಾಗಬೇಕಾಗಿದೆ ನಿನ್ನ ಅನುಗ್ರಹದಿಂದ ನಾವು, ನಮ್ಮ ಸೇವಕರು, ಹಾಗೂ ಮಿತ್ರರುಗಳಿಂದ ಕೂಡಿದ ಸೈನ್ಯದಿಂದ ನಮಗಿಂತ ಕೆಳಮಟ್ಟದ ಅಥವ ಮೇಲ್ಮಟ್ಟದ ಶತ್ರುಗಳನ್ನು ನಿರಾಕರಿಸುತ್ತೇವೆ. ನಮಗೆ ಈ ಕಾರ್ಯವನ್ನು ಮಾಡುವ ಸಾಮರ್ಥ್ಯವನ್ನು ಕರುಣಿಸು.

ಮನ್ಯುರಿಂದ್ರೋ ಮನ್ಯುರೇವಾಸ ದೇವೋ
ಮನ್ಯುರ್ಹೋತಾ ವರುಣೋ ಜಾತವೇದಾಃ।
ಮನ್ಯುಂ ವಿಶ ಈಳತೇ ಮಾನುಷೀರ್ಯಾಃ
ಪಾಹಿ ನೋ ಮನ್ಯೋ ತಪಸಾ ಸಜೋಷಾಃ॥

ಈ ಎರಡನೆಯ ಋಕ್ಕಿಗೆ-ಮನ್ಯು ಎಂಬ ಹೆಸರುಳ್ಳ ಲಕ್ಷ್ಮೀನರಸಿಂಹ ಸ್ವಾಮಿಯೆ! ನೀನು ಪರಮೈಶ್ವರ್ಯವುಳ್ಳವನಾದ್ದರಿಂದ "ಇಂದ್ರ" ಎಂಬ ಹೆಸರನ್ನು ಹೊಂದಿರುವೆ. ಸದಾ ಲೀಲಾ ವಿನೋದಿಯಾದ್ದರಿಂದ ಪ್ರಕಾಶ, ವಿಜಯ, ಕಾಂತಿಯಿಂದ ಕೂಡಿ ಸದಾ ಹೊಗಳಿಕೊಳಿಸಿಲ್ಪಡುವುದರಿಂದಲೂ, ಪ್ರತಿಕ್ಷಣದಲ್ಲೂ ಜಗತ್ತಿನ ಎಲ್ಲಾ ವ್ಯವಹಾರಾದಿಗಳನ್ನು ನಡೆಸುತ್ತಿರುವುದರಿಂದಲೂ, "ದೇವ"ಎಂಬ ಹೆಸರು ನಿನಗೆ ಸಲ್ಲುತ್ತಿದೆ. ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಕ್, ಮನಸ್ಸು ಈ ಆರು ಇಂದ್ರಿಯಗಳಿಗೆ ಬೇಕಾದ ವಿಷಯಗಳನ್ನು ಒದಗಿಸಿಕೊಟ್ಟು ಅದರ ಅನುಭವ ಕೊಡುವವನೂ ನೀನೇ ಆಗಿದ್ದೀಯೆ ಆದ್ದರಿಂದ "ಹೋತಾ" ಎನಿಸಿಕೊಂಡಿರುವಿ. ಜ್ಞಾನಿಗಳ ಅಜ್ಞಾನ ಪ್ರಕಟ ಮಾಡದೇ ಅವರನ್ನು ಉದ್ಧರಿಸಿ ಮೋಕ್ಷ ಕೊಡುವನಾಗಿದ್ದೀಯೆ. ಆದ ಕಾರಣ ನಿನ್ನ "ವರುಣ" ಎಂದು ಕರೆಯುತ್ತಾರೆ. ಲೋಕದಲ್ಲಿ ಹುಟ್ಟಿದ ಎಲ್ಲಾ ಪ್ರಾಣಿಗಳ ಜಾತಕಗಳನ್ನು ಸಂಪೂರ್ಣವಾಗಿ ಬಲ್ಲೆ ನೀನಾದ್ದರಿಂದ ಸರ್ವಜ್ಞನಾದ ನಿನಗೆ "ಜಾತವೇದ" ಎಂದು ಕರೆಯುವರು. ಸದಾ ತಮ್ಮ ತಮ್ಮ ಯೋಗ್ಯತಾನುಸಾರ ಹೆಚ್ಚು ಮಾತಾಡದೇ, ಧ್ಯಾನ, ಸ್ಮರಣ, ಮೌನಾದಿಗಳಿಂದ, ತಪಸ್ಸಿನಿಂದ ಕಾಲ ಕಳೆಯುತ್ತಿರುವ ನಿನ್ನ ಭಕ್ತರು ನಿನ್ನ ಅನುಗ್ರಹದಿಂದ ಸುಖವಾಗಿರುತ್ತಾರೆ. ನಿನ್ನ ಭಜಕರಾದ ಭಕ್ತರನೆಲ್ಲಾ ಹಾಗೂ ನಮ್ಮೆಲ್ಲರನ್ನೂ ಕಾಪಾಡು.

ಹೀಗೆ ಶ್ರೀ ಧೀರೇಂದ್ರ ಯತಿಗಳು ಬಹು ವಿದ್ವತ್‌ಪೂರ್ಣವಾಗಿ 14 ಋಕ್‌ಗಳಲ್ಲೂ ಹರಿಯನ್ನು ಕೊಂಡಾಡಿ 1707 ಕ್ರೋಧಿ ನಾಮ ಸಂವತ್ಸರದ ಫಾಲ್ಗುಣ ಶುಕ್ಲ ತ್ರಯೋದಶಿ ದಿನ ಹರಿಪುರ ವೈದಿದರು. ಇವರ ಪವಿತ್ರ ವೃಂದಾವನವು ಹಾವೇರಿ ತಾಲೂಕಿನ ಹೊಸರಿತ್ತಿಯ ವರದಾನದಿ ಪ್ರಾಂತದಲ್ಲಿ ಕಂಗೊಳಿಸುತ್ತಲಿದೆ. ಅಲ್ಲಿಯ ವಾತಾವರಣ ಎರಡನೆ ಮಂತ್ರಾಲಯದಂತೆ ವಿರಾಜಿಸುತ್ತಲಿದೆ. ಇಂತಹ ಮಹಾನುಭಾವರು ನಮ್ಮನ್ನು ಸದಾ ಅನುಗ್ರಹಿಸಲಿ.

★

# ಕೆಂಗಲ್ ಹನುಮಂತರಾಯಸ್ವಾಮಿ ದೇವಾಲಯ

ಹಸಿರನ್ನು ಮೈದುಂಬಿಕೊಂಡಿರುವ ಪುಟ್ಟ-ಪುಟ್ಟ ಗುಡ್ಡ ಗಾಡುಗಳ ಸಾಲು, ಅವುಗಳಿಂದ ಹರಿಯುವ ಝರಿಗಳಿಂದಾದ ಸಣ್ಣ ಪುಟ್ಟ ಸರೋವರಗಳು, ಅವುಗಳಿಂದ ಪ್ರತಿಫಲಿಸುವ ನೇಸರ ಕಿರಣಗಳನ್ನು ನೋಡಿ ನಲಿಯುತ್ತಿರುವ ನೀಲಗಿರಿ, ಹುಣಿಸೆ, ಮಾವು, ತೆಂಗು ಮುಂತಾದ ಮರಗಳು, ಆ ಮರಗಳನ್ನೇರಿ ತಮ್ಮ ನಿತ್ಯ ಕಲಾಪಗಳನ್ನು ನಡೆಸುತ್ತಿರುವ ಮರಕೋತಿಗಳ ತುಕಡಿಗಳನ್ನು ನಾವು ಗಮನಿಸಿದಾಗ ಈ ಒಂದು ನಿರ್ದಿಷ್ಟ ಪ್ರದೇಶವು ಮಲೆನಾಡ ಪ್ರಕೃತಿಗೂ, ತೀರ ಪ್ರದೇಶದ ಪ್ರಕೃತಿಗೂ ಭಿನ್ನವಾದ ವಿಶಿಷ್ಟ 'ಬಯಲುಸೀಮೆ'ಯ ಸೊಬಗನ್ನು ಸಾದರಪಡಿಸುತ್ತಿರುವಂತೆ ಅನುಭವವಾಗುತ್ತದೆ. ಈ ವನವೇದಿಕೆಗೆ ಹಣೆಬೊಟ್ಟನ್ನಿಟ್ಟಂತೆ ಹಸಿರು ಗುಡ್ಡಗಳ ನಡುವೆ ಕೆಂಪು ಕಲ್ಲು ಬಂಡೆಗಳಿಂದಾವೃತ್ತವಾದ ಸ್ಪಷ್ಟ ಪ್ರದೇಶವೊಂದು ಕಾಣಿಸಿಕೊಂಡು, ಈ ಪ್ರದೇಶದ ಸೊಬಗನ್ನು ಮತ್ತಷ್ಟು ವೃದ್ಧಿಸಿದೆ. ಈ ಒಂದು ನಿರ್ದಿಷ್ಟ ಪ್ರದೇಶವೇ, ಪ್ರತಿನಿತ್ಯವೂ ಈ ಮಾರ್ಗವಾಗಿ ಓಡಾಡುವ ಪ್ರತಿಯೊಬ್ಬರನ್ನೂ ಕೈಬೀಸಿ ಕರೆಯುವ 'ಕೆಂಗಲ್'. ಎಲ್ಲಿ ನೋಡಿದರೂ ಕೆಂಪು ಬಂಡೆಕಲ್ಲುಗಳೇ ಈ ಪ್ರದೇಶದಲ್ಲಿ ಹರಡಿಕೊಂಡಿರುವುದರಿಂದ ಈ ಪ್ರದೇಶಕ್ಕೆ 'ಕೆಂಗಲ್' ಎಂಬ ಹೆಸರು ಬರಲು ಕಾರಣವಾಗಿದೆ. ಈ ಕೆಂಪು ಬಂಡೆಕಲ್ಲುಗಳಲ್ಲೊಂದರಲ್ಲಿ ಆಂಜನೇಯ ಸ್ವಾಮಿಯನ್ನು ಕಡೆದು ನಿರ್ಮಿಸಿರುವುದರಿಂದ ಈ ದೇವರಿಗೆ 'ಕೆಂಗಲ್ ಆಂಜನೇಯ ಸ್ವಾಮಿ' ಅಥವಾ "ಕೆಂಗಲ್ ಹನುಮಂತರಾಯ ಸ್ವಾಮಿ" ಎಂಬ ಹೆಸರು ಬರಲು ಕಾರಣವಾಗಿದೆ.

ಬೆಂಗಳೂರಿನಿಂದ ಮೈಸೂರಿಗೆ ಹೋಗುವ ಕರ್ನಾಟಕ ರಾಜ್ಯ ಹೆದ್ದಾರಿಯಲ್ಲಿ ಬೆಂಗಳೂರಿಗೆ ಸುಮಾರು 55 ಕಿಲೋ ಮೀಟರುಗಳ ದೂರದಲ್ಲಿ ಬೆಂಗಳೂರು ಜಿಲ್ಲೆಯ 'ರಾಮನಗರ' ಮತ್ತು 'ಚೆನ್ನಪಟ್ಟಣ'ಗಳ ನಡುವೆ ಈ ಪ್ರದೇಶವನ್ನು ನಾವು ಯಾವ ಅಡಚಣೆಯೂ ಇಲ್ಲದೆಯೇ ಗುರುತಿಸಬಹುದು. ಅಧಿಕ ಸಂಚಾರವುಳ್ಳ ಹೆದ್ದಾರಿಯ ಪಕ್ಕದ ಕೆಲವೇ ಗಜಗಳ ದೂರದಲ್ಲಿ ಸೌಮ್ಯವಾಗಿ ನಿರೂಪಿತವಾಗಿರುವ ಈ ನೀಲವರ್ಣದ ನವೀನ ದೇವಾಲಯವನ್ನು ನಾವು ನೋಡಿದಾಗ ಲೋಕದ ಜಂಜಡವನ್ನೆಲ್ಲಾ ಮರೆತು, ಭಾವಪರವಶರಾಗುವುದರಲ್ಲಿ ಅತಿಶಯವೇನಿಲ್ಲ.

ಶ್ರೀ ವ್ಯಾಸರಾಜ ಯತಿಗಳು ಕ್ರಿಸ್ತಶಕ 1520ರ ಸುಮಾರಿನಲ್ಲಿ ಈ ಪ್ರದೇಶದ ಕೆಂಪು ಬಂಡೆಕಲ್ಲುಗಳೊಂದರಲ್ಲಿ ಆಂಜನೇಯ ಮೂರ್ತಿಯನ್ನು ಕಡೆಯಿಸಿ 'ಕೆಂಗಲ್ಲ ಹನುಮಂತರಾಯ ಸ್ವಾಮಿಯ' ದೇವಾಲಯ ನಿರ್ಮಾಣಕ್ಕೆ ನಾಂದಿ ಹಾಡಿರುವರು.



ಇಲ್ಲಿಗೆ ಸಮೀಪದ 'ಅಬ್ಬೂರು' ಎಂಬ ಗ್ರಾಮದಲ್ಲಿ ಬ್ರಹ್ಮಣ್ಯತೀರ್ಥರ ಸಾಕುಮಗನಾಗಿ ಬೆಳೆದ ವ್ಯಾಸರಾಜ ಯತಿಗಳು ವಿಜಯನಗರ ಸಾಮ್ರಾಜ್ಯದ ಉನ್ನತಿಯ ಕಾಲದಲ್ಲಿ ಅದರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದವರೂ, ಶ್ರೀ ಕೃಷ್ಣದೇವರಾಯರಿಗೆ ಒದಗಿ ಬಂದ 'ಕುಹೂಯೋಗ'ದ ನಿವಾರಕರೂ ಹಾಗೂ ಹಂಪೆಯಲ್ಲಿನ ಯಂತ್ರೋದ್ಧಾರ ಪ್ರಾಣದೇವರ ಪ್ರತಿಷ್ಠಾಪನಾಚಾರ್ಯರೂ ಆಗಿದ್ದಾರೆ. ಇವರು ಇಲ್ಲಿಯೇ ಅಲ್ಲದೆ ಅಂದಿನ ವಿಜಯನಗರ ಸಾಮ್ರಾಜ್ಯದ ವಿವಿಧೆಡೆಗಳಲ್ಲಿ ಈ ಆಂಜನೇಯ ಸ್ವಾಮಿಯ ಮೂರ್ತಿಗಳನ್ನು ಕಡೆಯಿಸಿ ಆಂಜನೇಯನ 'ಬಾಲದಲ್ಲಿ ಗಂಟೆ' ಇರುವುದು ತಾವು ಸ್ಥಾಪಿಸಿರುವ ಮೂರ್ತಿಗಳ ವೈಶಿಷ್ಟ್ಯವೆಂದು ನಿರೂಪಿಸಿದ್ದಾರೆ.

ಇವರಿಂದ ಹೀಗೆ ಪ್ರತಿಷ್ಠಾಪಿಸಲ್ಪಟ್ಟ ಈ ಆಂಜನೇಯ ಮೂರ್ತಿಯು ಕೆಲಕಾಲ ಜನರ ದೃಷ್ಟಿಯಿಂದ ವಂಚಿತವಾಗಿ, ಅದರ ಸುತ್ತ ಮುತ್ತ ಗಿಡಗೆಂಟಿಗಳು ಬೆಳೆದು ಕಣ್ಣಿಗೆ ಕಾಣಿಸದಂತಾಯಿತು. ಆಗ ಈ ಮೂರ್ತಿಗೆ ಸಮೀಪದಲ್ಲಿಯೇ ಒಂದು ಸಣ್ಣ 'ಅಂಚೆಮನೆ' ಇದ್ದುದರಿಂದ ಆ ಮಾರ್ಗವಾಗಿ ಓಡಾಡುವ ದಾರಿಹೋಕರು, ಆಗಾಗ ಅಲ್ಲಿ ವಿಶ್ರಾಂತಿ ಪಡೆದು ಮುಂದುವರಿಯುವುದು ರೂಢಿಯಲ್ಲಿತ್ತು. ಒಂದು ದಿನ ಒಬ್ಬ ದಾರಿಹೋಕನು ಸಂತೆಗಾಗಿ ತನ್ನ ಎತ್ತುಗಳನ್ನು ಕೊಂಡೊಯ್ಯುವಾಗ ಆತನ ಕಣ್ಣು ತಪ್ಪಿಸಿ ಆ ಎತ್ತುಗಳು ಹೇರುಗಳ ಸಮೇತವಾಗಿ ಕಾಣೆಯಾದವು. ಸಂಜೆಯಾದರೂ ಆ ಎತ್ತುಗಳು



ಚಿತ್ರಲೇಖನ :
ಶ್ರೀ ಪಿ. ಶ್ರೀಕಂಠಾಚಾರ್ಯ

ಕಾಣಿಸದಾದಾಗ ಆತ ಈ ಆಂಜೆಮನೆಯಲ್ಲಿ ವಿಶ್ರಾಂತಿಪಡೆಯಬೇಕಾಯಿತು. ಅಂದಿನರಾತ್ರಿ ಆತನಿಗೆ "ಆತನ ಕಾಣೆಯಾದ ಎತ್ತುಗಳು ತನ್ನ ಬಳಿ ಇರುವುದಾಗಿಯೂ ಬೆಳಗಾದ ನಂತರ ಆ ಸ್ಥಳದಿಂದ ಹತ್ತು–ಹದಿನೈದು ಹರದಾರಿ ದೂರ ನಡೆದು ಬಂದರೆ ಅವು ಅಲ್ಲಿ ಕಾಣಸಿಗುವುದಾಗಿಯೂ" ಎಂದು ದೇವರು ತಿಳಿಸಿದಂತೆ ಕನಸು ಬಿದ್ದಿತು. ಅದರಂತೆಯೇ ಆತ ಬೆಳಗಾದ ನಂತರ ಹುಡುಕಲು, ಆ ಎತ್ತುಗಳು ಈ ಆಂಜನೇಯ ಮೂರ್ತಿಯ ಬಳಿಯಲ್ಲಿಯೇ ದೊರೆತವು. ಆಗ ಆತ ಈ ಮೂರ್ತಿಯ ಸುತ್ತಮುತ್ತಲಿನ ಗಿಡಗಂಟೆಗಳನ್ನೆಲ್ಲಾ ತೆಗೆದು ಸ್ವಚ್ಛಗೊಳಿಸಿ ಒಂದು ಅಂಕಣದ ಆಲಯವನ್ನು ಕಟ್ಟಿಸಿ, ನಿತ್ಯ ಪೂಜೆಗಾಗಿ ಒಬ್ಬ ಅರ್ಚಕರನ್ನೂ ನೇಮಕ ಮಾಡುತ್ತಾನೆ. ಅಂದಿನಿಂದ "ಅಯ್ಯನ ಗುಡಿ" ಎಂದು ಪ್ರಸಿದ್ಧಿಯಾದ ಈ ದೇವಾಲಯವು "ಹುಲಿಮತ್ತಿಗೆ" ಎಂಬ ಅರಣ್ಯ ಪ್ರದೇಶದ ಮಧ್ಯಭಾಗದಲ್ಲಿದ್ದುದರಿಂದ ಅಲ್ಲಿಗೆ ಹೋಗಿಬರುವ ಮಾರ್ಗ ಅಷ್ಟು ಸುಗಮವಾಗಿರಲಿಲ್ಲ. ಆದರೂ ಬರಬರುತ್ತಾ ಈ ನೆಲೆಯು ತನ್ನ ಸ್ವರೂಪವನ್ನು ಸೌಮ್ಯರೂಪಕ್ಕೆ ಮಾರ್ಪಡಿಸಿಕೊಂಡು, ನೈಜ ಪ್ರಕೃತಿಯ ನಿರ್ಮಲ ಆಕರ್ಷಣೆಯಾಗಿ ನೋಡುವವರ ಮನಸ್ಸಿಗೆ ಅತ್ಯಂತ ಆಹ್ಲಾದಕರ ಅನುಭವ ನೀಡುವುದರಲ್ಲಿ ಸಫಲವಾಯಿತು. ಇದನ್ನು ಮನಗಂಡು ಅಂದಿನ ಮೈಸೂರು ಸಂಸ್ಥಾನದ ದಿವಾನರಾಗಿದ್ದ ಸರ್. ಮಿರ್ಜಾ ಇಸ್ಮಾಯಿಲ್‌ರವರು ದೇವಾಲಯದ ಮುಂದಿನ ರಸ್ತೆಯನ್ನು ಸರಿಪಡಿಸಿ ಭಕ್ತರ ಓಡಾಟಕ್ಕೆ ಅನುವು ಮಾಡಿಕೊಟ್ಟು, ದೇವಾಲಯದ ಬಗ್ಗೆ ಆಸಕ್ತಿ ತಳೆದವರಲ್ಲಿ ಮೊದಲಿಗರಾದರು. ಅನಂತರ 1952 ರಲ್ಲಿ ಮೈಸೂರು ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದ ದಿವಂಗತ ಶ್ರೀ ಕೆಂಗಲ್ ಹನುಮಂತಯ್ಯನವರು ಈ ದೇವಾಲಯದ ಅಭಿವೃದ್ಧಿಯ ಬಗ್ಗೆ ಅತ್ಯಂತ ಕಾಳಜಿವಹಿಸಿದವರಲ್ಲೊಬ್ಬರಾದ್ದಾರೆ. ಇಲ್ಲಿಗೆ ಸಮೀಪದ ಒಂದು ಸಣ್ಣ ಹಳ್ಳಿಯಲ್ಲಿ ಜನಿಸಿದ, ಇದೇ ದೇವರ ನಾಮಾಂಕಿತರಾದ ಇವರು ಅಪಾರ ಶ್ರದ್ಧಾ ಭಕ್ತಿಗಳಿಂದ ಈ ದೇವಾಲಯಕ್ಕೆ ಸಲ್ಲಿಸಿರುವ ಸೇವೆ ಗಣನೀಯವಾದುದು.

ಇವರ ನೇತೃತ್ವದಲ್ಲಿ ಮೊದಲಿಗೆ ಈ ದೇವಾಲಯವನ್ನು ಮತ್ತಷ್ಟು ವಿಸ್ತರಿಸಿ, ನವೀಕರಣಗೊಳಿಸಲು ನಿರ್ಧರಿಸಿ, 1969ರಲ್ಲಿ ಒಂದು "ಜೀರ್ಣೋದ್ಧಾರ ಸಮಿತಿ" ಯನ್ನು ರೂಪಿಸಲಾಯಿತು ಈ ಸಂದರ್ಭದಲ್ಲಿ ಕಾಣಿಕೆಯ ರೂಪದಲ್ಲಿ ಪಡೆಯಲಾದ 40 ಸಹಸ್ರ ರೂಪಾಯಿಗಳ ಮೂಲ ನಿಧಿಯೊಂದಿಗೆ ಒಟ್ಟು 15 ಲಕ್ಷ ರೂಪಾಯಿಗಳ ದೇವಾಲಯ ಅಭಿವೃದ್ಧಿ ಯೋಜನೆಯೊಂದನ್ನು ಸಿದ್ಧಪಡಿಸಲಾಯಿತು. ಇಷ್ಟು ದೊಡ್ಡ ಮೊತ್ತವನ್ನು ತುಂಬಲು ವಿಶೇಷ ಹುಂಡಿಗಳ ಮೂಲಕ, ನೇರ ವಂತಿಗೆಯ ಮೂಲಕ, ಹೂವಿನ ಹಾರಗಳ ಹರಾಜಿನ ಮೂಲಕ ಹಾಗೂ ಬಂಧು ಬಾಂಧವರ ಕಾಣಿಕೆಗಳ ಮೂಲಕ ನಿಧಿ ಸಂಗ್ರಹಣಾ ಕಾರ್ಯವು ಭರದಿಂದ ಸಾಗಿತು. 1970 ರ ಆಗಸ್ಟ್ ತಿಂಗಳಲ್ಲಿ ಅಸ್ತಿವಾರ ಶಿಲಾನ್ಯಾಸವನ್ನು ನೆರವೇರಿಸಿಕೊಂಡು ಸಂಪೂರ್ಣವಾಗಿ ಕಲ್ಲಿನಿಂದಲೇ ನಿರ್ಮಿಸಲಾಗಿರುವ ಈ ದೇವಾಲಯ ಕಾರ್ಯವು ಈಗ ಸಣ್ಣಪುಟ್ಟ ಕೆಲಸಗಳನ್ನು ಬಿಟ್ಟರೆ ಪೂರ್ಣಗೊಂಡಂತಾಗಿ, ಹದಿನೈದು ಲಕ್ಷ ರೂಪಾಯಿಗಳಿಗೂ ಮೀರಿ ಹಣ ಖರ್ಚಾಗಿದೆ. ಬೆಂಗಳೂರಿನ ಸುಪ್ರಸಿದ್ಧ 'ವಿಧಾನ ಸೌಧ' ವನ್ನು ನಿರ್ಮಿಸಿದ ರೂವಾರಿಗಳನ್ನೇ ಈ ಕಟ್ಟಡ ಕೆಲಸಕ್ಕಾಗಿ ನೇಮಿಸಿರುವುದರಿಂದ ಒಳ್ಳೆಯ ಶಿಲ್ಪಕಲಾ ಚಾತುರ್ಯವನ್ನು ಸೊಗಸಾಗಿ ಮೂಡಿಸಲು ಸಾಧ್ಯವಾಗಿ ನಯನ ಮನೋಹರ ದೇವಾಲಯ ರೂಪುಗೊಳ್ಳಲು ಕಾರಣವಾಗಿದೆ.

ನವೀಕರಣಗೊಂಡ ದೇವಾಲಯವನ್ನು ಮೊದಲಿಗಿದ್ದ ಒಂದು ಅಂಕಣದ ದೇವಾಲಯಕ್ಕೆ ಹೊಂದಿಕೊಂಡಂತೆಯೇ ಗರ್ಭಗುಡಿಯ ವಿಮಾನ ಗೋಪುರವನ್ನು ಅಭಿವೃದ್ಧಿಗೊಳಿಸಿ. ಮುಂದುವರಿಸಲಾಗಿದೆ. ಇದೇ ಗರ್ಭಗುಡಿಯ ಇಕ್ಕೆಲಗಳಲ್ಲಿ ಒಂದು ಕಡೆ ಸೀತಾರಾಮಲಕ್ಷ್ಮಣರ ಮೂಲ ವಿಗ್ರಹವನ್ನೂ ಪ್ರತಿಷ್ಠಾಪಿಸಲಾಗಿದೆ. ಮತ್ತೊಂದು ಕಡೆ ರಾಮಾನುಜಾಚಾರ್ಯರು ತಮ್ಮ ಜೀವಿತ ಕಾಲದಲ್ಲಿ ಒಮ್ಮೆ ಇಲ್ಲಿಗೆ ಭೇಟಿ ನೀಡಿದ್ದರು ಎಂಬುದರ ಕುರುಹಾಗಿರುವ ರಾಮಾನುಜಾಚಾರ್ಯರ ವಿಗ್ರಹಗಳನ್ನೂ ನಾವು ಕಾಣಬಹುದು. ಇವೆಲ್ಲಕ್ಕೂ ಹೊಂದಿಕೊಂಡಂತೆ ಭದ್ರವಾದ ತಳಹದಿಯ ಮೇಲೆ ದೇವಾಲಯ "ಪ್ರಾಂಗಣ"ವನ್ನು ನಿರ್ಮಿಸಲಾಗಿದೆ, ಈ ಪ್ರಾಂಗಣವು ಒಂದು ದೊಡ್ಡ ಹಜಾರದಂತಿದ್ದು ಒಟ್ಟು ಎಂಟು ಬೃಹತ್ ಕಂಬಗಳ ಆಧಾರದ ಮೇಲೆ ಇದರ ಗೋಪುರವನ್ನು ಅಳವಡಿಸಲಾಗಿದೆ. ಇದರ ಗೋಡೆಗಳನ್ನು ಕಲ್ಲು ಚಪ್ಪಡಿಗಳ ಆಧಾರದಿಂದ ಚಪ್ಪಟೆಯಾಗಿ ಜೋಡಿಸಿದಂತೆ, ವಿನ್ಯಾಸಗೊಳಿಸಲಾಗಿದೆ. ಮೇಲಿನ ಪಕ್ಷಿನೋಟಕ್ಕೆ ಗೋಡೆಯ ಮುಂಭಾಗ ಮತ್ತು ಹಿಂಭಾಗವು ತನ್ನ ಎರಡೂ ಕಡೆಗಳಲ್ಲಿ ಅರ್ಧ ವೃತ್ತಾಕಾರವಾಗಿ ಉಬ್ಬಿಕೊಂಡಿದ್ದು, ಮಧ್ಯಭಾಗವು ಸಮತಟ್ಟಾದ ಗೋಡೆಯಿಂದ ನಿರ್ಮಿತವಾಗಿದೆ. ಈ ವಿನ್ಯಾಸವೇ ಇದಕ್ಕೆ "ಡಂಬಲ್" ಆಕಾರ ಬರಲು ಕಾರಣವಾಗಿದೆ. ಇದೇ ಗೋಡೆಯಲ್ಲಿನ ಆಯ್ದ ಸ್ಥಳಗಳಲ್ಲಿ ವಾತಾಯನ ವ್ಯವಸ್ಥೆಗನುಗುಣವಾಗಿ ಒಟ್ಟು ಹತ್ತು ಕಿಟಕಿಗಳನ್ನು ಅಳವಡಿಸಲಾಗಿದ್ದು, ಅವುಗಳ ಹೊರಭಾಗವನ್ನು ಕಲ್ಲಿನ ಕುಸುರಿಕೆಲಸದಿಂದ ಪುಷ್ಪಕ ವಿಮಾನಗಳ ರೀತಿ ವಿನ್ಯಾಸ ಗೊಳಿಸಲಾಗಿದೆ. ಅಲ್ಲದೆ ಈ ಕಿಟಕಿಗಳಿಗೆ ಅಳವಡಿಸಲಾಗಿರುವ ಕಬ್ಬಿಣದ ಜಾಲಂದ್ರಗಳಲ್ಲಿ ರಾಮಾಯಣ ಹಾಗೂ ಮಹಾಭಾರತ

ದಲ್ಲಿನ ವಿವಿಧ ಸನ್ನಿವೇಶಗಳಲ್ಲಿ ಆಂಜನೇಯನು ಪಾಲ್ಗೊಂಡ ಚಿತ್ರಗಳನ್ನು ಬಿಡಿಸಲಾಗಿದೆ.

ಈ ಪ್ರಾಂಗಣದ ಮೇಲುಭಾಗದಲ್ಲಿ ವಿಭಿನ್ನ ವಾಸ್ತುಶಿಲ್ಪ ಶೈಲಿಯಲ್ಲಿ ಮುಖ್ಯ ಗೋಪುರವನ್ನು ನಿರ್ಮಿಸಲಾಗಿದೆ. ಗೋಪುರದ ಒಳಭಾಗವು ಶೂನ್ಯವಾಗಿದ್ದು ಹೊರಭಾಗವು ಗಿಡ್ಡವಾಗಿದೆ. ಮೊದಲಿಗೆ ಚೌಕಾಕಾರ, ಅದರ ಮೇಲೆ ಷಟ್ಕೋಣಾಕಾರ, ಅದರಿಂದ ಮೇಲೆ ವೃತ್ತಾಕಾರ ಮತ್ತೆ ಚೌಕಾಕಾರ, ಈ ಆಕಾರಗಳ ಮಧ್ಯೆ ಬೋಲುಗಳು, ದಳಗಳು ಹಾಗೂ ಸಮಾನಾಂತರ ಸ್ಪಷ್ಟ ಗುರುತುಗಳ ವಿನ್ಯಾಸವನ್ನು ರಚಿಸಿ ಮತ್ತೆ ಕೊನೆಯಲ್ಲಿ ಅರ್ಧ ವೃತ್ತಾಕಾರದ ಗೋಳವೊಂದನ್ನು ಅಳವಡಿಸಿ ಅದರ ಮೇಲೆ ಕಳಶವನ್ನು ಪ್ರತಿಷ್ಠಾಪಿಸಲಾಗಿದೆ. ಈ ಗೋಳದ ಭಾಗವು ಈ ಗಿಡ್ಡ ಗೋಪುರದ ತುದಿಯಿಂದ ಬೇರ್ಪಡಿಸಿದಂತೆ ಮೇಲು ನೋಟಕ್ಕೆ ಕಂಡು ಬಂದು, ನಮಗೆ ತಂಜಾವೂರಿನ ಬೃಹದೀಶ್ವರ ದೇವಾಲಯದ ವಾಸ್ತು ಶಿಲ್ಪ ವಿನ್ಯಾಸವನ್ನು ನೆನಪಿಗೆ ತರುತ್ತದೆ.

ಈ ಪ್ರಾಂಗಣಕ್ಕೆ ಹೊಂದಿಕೊಂಡಂತೆ ಮುಖ್ಯ ದ್ವಾರವನ್ನು ಹೊಂದಿರುವ ಮುಖಮಂಟಪವನ್ನು ಹಲವಾರು ಮೆಟ್ಟಿಲುಗಳುಳ್ಳ ವಿಶಾಲವಾದ ಕಲ್ಲಿನ ವೇದಿಕೆಯ ಮೇಲೆ ರಚಿಸಲಾಗಿದೆ. ಇದನ್ನೂ ಸಹ ಹತ್ತು ಸುಂದರ ಕಂಬಗಳ ಆಧಾರದ ಮೇಲೆ ನಿರ್ಮಿಸಲಾಗಿದ್ದು, ಮುಂದಿನ ಸಾಲಿನ ಎರಡು ಕಂಬಗಳ ತುದಿಯನ್ನು 'ಹೊಂಬಾಳೆ'ಯ ರೀತಿಯಲ್ಲಿ ವಿನ್ಯಾಸಗೊಳಿಸಲಾಗಿದೆ. ಈ ವಿನ್ಯಾಸವೂ ಸಹ ಚೋಳ ಶೈಲಿಯ ಶಿಲ್ಪಕಲೆಯನ್ನು ನಮ್ಮ ನೆನಪಿಗೆ ತರುತ್ತದೆ. ಅಲ್ಲದೇ ಇದೇ ಕಂಬಗಳ ಆಧಾರದ ಮೇಲೆ ಒಂದು ಕಮಾನನ್ನು ವ್ಯವಸ್ಥೆಗೊಳಿಸಿ ಅದರಲ್ಲಿ ವಾಲಿ-ಸುಗ್ರೀವರ ಅಪ್ಪುಗೆಯ ಚಿತ್ರವನ್ನು ಕಬ್ಬಿಣದ ಸರಳುಗಳಿಂದ ಬಿಡಿಸಲಾಗಿದೆ.

ಇದರಿಂದ ಮುಂದಕ್ಕೆ ಕಲ್ಲಿನಿಂದಲೇ ನಿರ್ಮಿಸಲಾದ 'ಗರುಡಗಂಬ'ದ ಬುಡದಲ್ಲಿ ಭೂಮಿಯ ಮಟ್ಟದಲ್ಲಿ ವಿಶಾಲವಾದ 'ಧ್ಯಾನಪೀಠ'ವೊಂದನ್ನು ರಚಿಸಲಾಗಿದೆ. ಅಲ್ಲದೇ ದೇವಾಲಯದ ಈ ಸಂಕೀರ್ಣದ ಸುತ್ತಲೂ ಕೈಸಾಲೆಯ ಮಂಟಪವನ್ನು ನಿರ್ಮಿಸುವ ಯೋಜನೆಗನುಗುಣವಾಗಿ ಹಿಂಭಾಗದಲ್ಲಿ ಒಂದು ಹಂತದ ಕೈಸಾಲೆಯನ್ನು ನಿರ್ಮಿಸಲಾಗಿದೆ.

ಸಾಮಾನ್ಯವಾಗಿ ನಾವು ಕಾಣುವ ಎಲ್ಲ ಆಂಜನೇಯ ಸ್ವಾಮಿಯ ಮೂರ್ತಿಗಳೂ ಎರಡೂ ಕಾಲುಗಳನ್ನು ಅಂತರಗೊಳಿಸಿ, ಒಂದು ಕೈಯನ್ನು ಮೇಲೇರಿಸಿ, ಒಂದು ಕಡೆಗೆ ಓರೆಯಾಗಿ ವೀರ ಭಂಗಿಯಲ್ಲಿ ನಿಂತಿರುವಂತೆ ಈ ಮೂರ್ತಿಯೂ ನಿಂತಿದ್ದರೂ, ತನ್ನ 'ಎರಡೂ ಕಣ್ಣುಗಳು' ನಮಗೆ ಗೋಚರಿಸುವಂತೆ 'ನಮ್ಮ ಕಡೆಗೆ' ಮುಖ ಮಾಡಿ ನಿಂತಿರುವುದೊಂದು ಈ ಮೂರ್ತಿಯ ವೈಶಿಷ್ಟ್ಯ.

ಇದಲ್ಲದೇ ಒಂದೇ ಬುಡದಿಂದ ಹೊರಟ ಮೂರು ತೆಂಗಿನ ಮರಗಳ ಸಮೂಹವೊಂದು ಈ ದೇವಾಲಯದ ಮುಂಭಾಗದಲ್ಲಿ ಹುಟ್ಟಿಕೊಂಡಿರುವುದು ಈ ದೇವಾಲಯದ ಮತ್ತೊಂದು ವೈಶಿಷ್ಟ್ಯ. ಇದರಿಂದ ಮುಂದೆ ಧ್ಯಾನಪೀಠಕ್ಕೆ ಹೊಂದಿಕೊಂಡಂತೆ ಪುಷ್ಕರಿಣಿ ಇದೆ. ಅದರಿಂದ ಸ್ವಲ್ಪ ಮುಂದಕ್ಕೆ ಒಂದು ಕೆರೆಯನ್ನು ನಿರ್ಮಿಸಲಾಗಿದೆ. ಇದರ ಪಕ್ಕದಲ್ಲಿಯೇ 'ಗುಲಾಬಿ ತೋಟ'ವನ್ನು ಬೆಳೆಸಲಾಗಿದೆ. ದೇವಾಲಯದ ಹಿಂಭಾಗದ ಎತ್ತರವಾದ ಸಾಲಿನಲ್ಲಿ ಅರ್ಚಕರ ವಸತಿಗೃಹಗಳನ್ನೇರ್ಪಡಿಸಲಾಗಿದೆ. ಇದೇ ಸಾಲಿನಲ್ಲಿ ಹೊಸವಾದ ಮತ್ತು ಹಳೆಯ ವಿವಿಧ ವಿಸ್ತೀರ್ಣಗಳುಳ್ಳ ಕಲ್ಯಾಣ ಮಂಟಪಗಳನ್ನು ನಿರ್ಮಿಸಲಾಗಿದ್ದು, ಈ ಕಲ್ಯಾಣ ಮಂಟಪಗಳ ಪೈಕಿ 'ಬೋರಯ್ಯ - ಬಸವಯ್ಯ' ಕಲ್ಯಾಣ ಮಂಟಪವು ಪ್ರಮುಖವಾದುದು ಮತ್ತು ಅತ್ಯಂತ ವಿಶಾಲವಾದುದಾಗಿದೆ. ಮದುವೆಗಳ ಸುಗ್ಗಿಯಲ್ಲಿ ಈ ಕಲ್ಯಾಣ ಮಂಟಪಗಳೇ ಸಾಲದೆಂಬಂತೆ ಸುತ್ತಮುತ್ತಲಿನ ಬಯಲಿನಲ್ಲಿರುವ ಗಿಡಮರಗಳ ನೆರಳಿನಲ್ಲಿಯೇ ದಿನಂಪ್ರತಿ ನೂರಾರು ಮದುವೆಗಳು ನೆರವೇರುತ್ತವೆ. ಇದೇ ಎತ್ತರ ಪ್ರದೇಶದಲ್ಲಿ 'ಹನುಮನಗದೆ'ಯ ಆಕಾರದ 'ನೀರಿನ ಟ್ಯಾಂಕ್' ಒಂದನ್ನು ನಿರ್ಮಿಸಲಾಗಿದೆ ಪಕ್ಕದಲ್ಲಿಯೇ ಉದಕಮಂಡಲದ ವನದಂತಿರುವ ನೀಲಗಿರಿ ತೋಪಿನ ಅಂಚಿನಲ್ಲಿ 'ಸಸ್ಯಾಹಾರಿ ಉಪಹಾರ ಗೃಹ'ವೊಂದನ್ನು ಯಾತ್ರಿಕರ ನಿತ್ಯ ಊಟ ತಿಂಡಿಯ ವ್ಯವಸ್ಥೆಗಾಗಿ ನಿರ್ಮಿಸಲಾಗಿದೆ. ಮುಂಭಾಗದ ರೈಲು ಮಾರ್ಗಕ್ಕೆ ಹೊಂದಿಕೊಂಡಂತೆ ಕಲ್ಲಿನ ಕಟ್ಟಡದ 'ರೈಲು-ನಿಲ್ದಾಣ'ವನ್ನೂ ನಿರ್ಮಿಸಲಾಗಿದೆ. ಇಲ್ಲಿ ಅತಿವೇಗದ ರೈಲುಗಳ ವಿನಃ ಉಳಿದೆಲ್ಲ ರೈಲುಗಳು ನಿಲ್ಲುವ ವ್ಯವಸ್ಥೆ ಮಾಡಲಾಗಿದೆ. ದೇವಾಲಯದ



ಸುತ್ತಲೂ ಉಬ್ಬು ತಗ್ಗು ಪ್ರದೇಶಗಳನ್ನು ಸರಿಪಡಿಸಿ ರಥ ಸಂಚಾರಕ್ಕಾಗಿ ರಸ್ತೆಯನ್ನು ನಿರ್ಮಿಸಲಾಗಿದೆ.

ಈ ದೇವಾಲಯದ ಪ್ರದೇಶದಿಂದ ಎಡಕ್ಕೆ ಸ್ವಲ್ಪ ಸಮೀಪದಲ್ಲಿ 'ರಾಮನಗರ' ಎಂಬ ಹೆಸರಿನಿಂದ ಪ್ರಸಿದ್ಧಿಯಾದ ಊರಿದೆ. ಇದಕ್ಕೆ ಹೊಂದಿಕೊಂಡಿರುವ ಬೆಟ್ಟದ ಮೇಲೆ ಶ್ರೀರಾಮದೇವರ ಆಲಯವಿದ್ದು, ಶಬರಿ, ಸಪ್ತಋಷಿ ಮುಂತಾದ ಪುರಾಣ ಪ್ರಸಿದ್ಧ ವಿಷಯಗಳಿಂದ ಆಸಕ್ತಿದಾಯವಾಗಿದೆ. ಇದೇ ಬೆಟ್ಟಗಳ ಸಮೂಹದಲ್ಲಿ ಪರ್ವತಾರೋಹಣ ತಂಡದವರು ಆಗಾಗ ತಮ್ಮ ತರಬೇತಿ ಶಿಬಿರಗಳನ್ನೇರ್ಪಡಿಸುವುದು, ಹಾಗೂ ಹಾಲಿವುಡ್ಡನ್ನೊಳಗೊಂಡಂತೆ ಎಲ್ಲ ಚಲನ ಚಿತ್ರ ತಂಡದವರು ಚಿತ್ರೀಕರಣ ನಡೆಸುವುದು ಸಾಮಾನ್ಯವಾಗಿದೆ. ದೇವಾಲಯ ಬಲಭಾಗಕ್ಕೆ ಸಮೀಪದಲ್ಲಿ ಕುವೆಂಪು ಮಹಾವಿದ್ಯಾಲಯ, ರೇಷ್ಮೆ ಕೃಷಿ

(28 ನೇ ಪುಟ ನೋಡಿ)

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾತು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. —ತಿ. ತಿ. ದೇ.

# ಪುಣ್ಯಧಾಮ ಕ್ಷೇತ್ರ

ಕನ್ನಡ ಶಾಸನ ಸಂಸ್ಕೃತಿಗಳ ಅಧ್ಯಯನದಲ್ಲಿ ಡಾ॥ ಚಿದಾನಂದ ಮೂರ್ತಿಯವರು ಈ ರೀತಿ ಪ್ರಸ್ತಾಪಿಸಿದ್ದಾರೆ– ಪ್ರಾಚೀನ ಕರ್ನಾಟಕದ ಊರಿಗೆ ದೇವಸ್ಥಾನವೇ ಕೇಂದ್ರಬಿಂದು. ಅದರ ಸುತ್ತ ಆ ಊರಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನವು ರೂಪುಗೊಳ್ಳುತ್ತಿದ್ದಿತು. ದೇವಸ್ಥಾನವು ಜನರ ದೈವಭಕ್ತಿ ಕೇಂದ್ರವಾಗಿದ್ದಂತೆ, ವಿದ್ಯಾಕೇಂದ್ರವೂ ಆಗಿದ್ದಿತು. ಶಿಲ್ಪ, ಚಿತ್ರ, ಸಂಗೀತ, ನರ್ತನಾದಿ ಕುಶಲ ಕಲೆಗಳು ದೇವಸ್ಥಾನದ ಆಶ್ರಯದಲ್ಲಿ ವರ್ಧಿಸಿದವು. ದೇವಸ್ಥಾನವು ಜನರ ನ್ಯಾಯಾಲಯವೂ ಆಗಿದ್ದಿತು. ಅಲ್ಲಿ ತಮ್ಮ ಕಷ್ಟಗಳನ್ನು ದುಃಖ ಬಂದಾಗ ಜನರು ಹೇಳಿಕೊಳ್ಳುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ಅಲಂಕರಿಸಿ ಪೂಜೋತ್ಸವಗಳನ್ನು ನಡೆಯಿಸಿ ಸುಖಿಸುತ್ತಿದ್ದರು. ಹೀಗೆ ಬಹುಮುಖವಾದ ಚಟುವಟಿಕೆಗಳಿಗೆ ಆಗರವಾಗಿ, ಜೀವನವನ್ನು ನಿಯಂತ್ರಿಸುತ್ತಿದ್ದ ದೇವಸ್ಥಾನಕ್ಕೆ ಒಂದು ಸ್ವತಂತ್ರ ವ್ಯಕ್ತಿತ್ವವಿದೆ.

ಈ ನಿಟ್ಟಿನಲ್ಲಿ ನಿರ್ಮಾಣವಾದ ಬೆಂಗಳೂರು ರಾಜಾಜಿನಗರದ 'ಎನ್' ಬ್ಲಾಕಿನಲ್ಲಿರುವ "ಪುಣ್ಯಧಾಮ" ಕ್ಷೇತ್ರವೂ ಒಂದು. ಧಾರಕ ಶಕ್ತಿಯಾದ 'ಶ್ರೀ ಮಾರುತಿ' ವಿಘ್ನನಾಶಕ-ಮಹಾಗಣಪತಿ'ಗಳ ಸನ್ನಿಧಾನವಾಗಿದೆ. ಭಂಡಾರಕೇರಿ ಮಠದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರು, ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥರು–ಉಭಯ ಶ್ರೀಗಳ ತಪೋಬಲದಿಂದ ಪ್ರತಿಷ್ಠಾಪನೆಗೊಂಡ ಶ್ರೀ ಮಾರುತಿ – ಮಹಾಗಣಪತಿ ಸಂಕಷ್ಟ ಪರಿಹಾರ ಕೇಂದ್ರವಾಗಿದೆ. ಧಾರ್ಮಿಕ ಸಾಂಸ್ಕೃತಿಕ ಪ್ರಸಾರದಿಂದ ಪವಿತ್ರ ಸನ್ನಿಧಿಯಾಗಿದೆ.

'ಪುಣ್ಯಧಾಮ'ವೆಂದೇ ಖ್ಯಾತನಾಗಿರುವ ಈ ಸಂಸ್ಥಾನ 1968ರಲ್ಲಿ ಸ್ಥಾಪಿತವಾಯಿತು "ಧರ್ಮೋ ರಕ್ಷತಿ ರಕ್ಷಿತಃ" ಎಂಬ ಧ್ಯೇಯವನ್ನು ಒಳಗೊಂಡು ಭಾರತೀಯ ಸಂಸ್ಕೃತಿ ಅಧ್ಯಯನದ ಮಾಧ್ಯಮವಾಗಿದೆ. ಬಾಲಕರಿಗೆ ಭಜನೆ ಮತ್ತು ನೀತಿಮಂಜರಿ ತರಗತಿಗಳು ಹಿರಿಯರಿಗೆ ಧರ್ಮ ಶ್ರವಣ, ಉಪನ್ಯಾಸಗಳನ್ನು ನಡೆಸುತ್ತಾ ಶ್ರೀ ಮಾರುತಿ–ಮಹಾಗಣಪತಿ ಕೃಪೆಯಿಂದ ಮುಂದುವರಿಯುತ್ತಿದೆ.

ದೇವೋತ್ತಮಾಯ ಪ್ರಾಣಾಯ
ಪಂಚರೂಪಾಯ ವಿಷ್ಣವೇ।
ವೈಶ್ವಾನರಾಯ ದೇವಾಯ
ನಮೋ ಭಗವತೇ ಸದಾ ॥
ಯತ್ರ ಜ್ಯೋತಿರಜಸ್ರಂ
ಯಸ್ಮಿನ್ ಲೋಕೇ ಸ್ವರ್ಹಿತಂ।
ತಸ್ಮಿನ್ಮಾಂ ದೇಹಿ ಪವಮಾನಮೃತೇ
ಲೋಕೇ ಅಕ್ಷಿತ ಇಂದ್ರಾಯೇಂದೋ
ಪರಿಸ್ರವ ॥

ಪವಮಾನ ಎಂದರೆ ಸಂಸಾರ ಸಾಗರದಿಂದ ದಾಟಿಸಿ ಪೂರ್ಣಾನಂದ ರೂಪವಾದ

**ಶ್ರೀ ಬಿ. ಎನ್. ಮುಕುಂದ**

ಕೈವಲ್ಯವನ್ನು ನೀಡುವ ಮುಖ್ಯಪ್ರಾಣ-ಶ್ರೀ ಮಾರುತಿ. ಭಗವಂತನ ಪೂರ್ಣ ಕೃಪೆಗೆ ಪಾತ್ರನಾದ ಈತನ ಮುಖಾಂತರವೇ ಆತನ ವಿಶಿಷ್ಟ ದರ್ಶನ ಎಲ್ಲರಿಗೂ ಆಗುವುದು. ನೆನೆದವರ ಮನದಲ್ಲಿ ಹಸಾದದಿಂದ ದರ್ಶನ ಗೈಯುವ ಮಾರುತಿಯನ್ನು ಶ್ರೀ ಮಧ್ವಾಚಾರ್ಯರು –

ಸರ್ವದೇವೋತ್ತಮೋ ವಾಯುಃ
ಇತಿ ಜ್ಞಾನಾನ್ನಚಾಪರಂ
ಪ್ರಿಯಮಸ್ತಿ ಹರೇ ಕಿಂಚಿತ್

ಎಂದು ಪ್ರಶಂಸಿಸಿದ್ದಾರೆ.

'ಪೋಷಿತಾರ್ಥ ಹೃದಯ'ನಾದ ಮಾರುತಿಯು ದ್ವೈತ ಸಿದ್ಧಾಂತ ಪ್ರತಿಪಾದಕನೂ ಹೌದು. ಕ್ಷೀರಸಾಗರ ಮಥನ ಕಾಲದಲ್ಲಿ ಉದ್ಭವನಾದ ವಿಷ ಪ್ರಕ್ಷಾಳನವನ್ನು ತನ್ನ ಕೈಯಲ್ಲಿ ಇಟ್ಟುಕೊಂಡು ತಿಕ್ಕಿ ತಿಕ್ಕಿ ನಿರ್ವೀಯವಾಗಿಸಿ ಶಿವನಿಗೆ ನೀಡಿದನು. ಶಿವನು ತನ್ನ ಕಂಠದಲ್ಲಿ ಇರಿಸಿಕೊಂಡು ನೀಲಕಂಠನೆನಿಸಿದನು.

ಮಹಾಗಣಪತಿ – ವಿಘ್ನನಾಶಕ – ಲೋಕ ಕಲ್ಯಾಣಕಾರಿ. ಮಹಾಭಾರತ ಗ್ರಂಥವನ್ನು ಕೃತಿಗಳಿಸಿದ ಈ ದೈವವು ತನ್ಮೂಲಕ ಧಾರ್ಮಿಕ ಸಂಸ್ಕೃತಿಯ ವಾಹಿನಿಗೆ ಸಂಕೇತವಾಗಿದೆ. ಈ ದೈವದ ಆರಾಧನೆ ಚೈತನ್ಯ ಕಾರಿಯಾದದು. ತ್ರೈಸಿದ್ಧಾಂತಗಳಿಗೂ ಆರಾಧ್ಯ ದೈವವಾದ ಮಹಾಗಣಪತಿಯಲ್ಲಿ ತತ್ತ್ವಭೇದ, ಸಾಂಸ್ಕೃತಿಕ ಭೇದ ಯಾರೂ ಹೊಂದದೆ ಇರುವುದು ಆ ದೈವದ ವೈಶಿಷ್ಟ್ಯ.







# ಜನಪದ ಸಾಹಿತ್ಯದಲ್ಲಿ ಹನುಮಂತರಾಯ

ಜನಪದ ಗೀತೆಗಳಲ್ಲಿ ದೈವವನ್ನು ಕುರಿತ ಹಾಡಿರುವ ಗೀತೆಗಳಿಗೆ ಲೆಕ್ಕವಿಲ್ಲ. ಇದರಲ್ಲೂ ನಾಡ ದೇವತೆಗಳನ್ನು ಕುರಿತು ಗೀತೆಗಳು ಹಾಗೂ ಗ್ರಾಮ ದೇವತೆಗಳನ್ನು ಕುರಿತ ಹಾಡುಗಳೆಂದು ವಿಭಾಗಿಸಿಕೊಂಡು ಅಧ್ಯಯನಿಸಬಹುದು. ಹಳ್ಳಿಗರಿಗೆ ಪ್ರಿಯವಾದ ಗ್ರಾಮದೇವತೆಗಳ ಸಾಲಿನಲ್ಲಿ ಹನುಮ ಅಗ್ರಪಂಕ್ತಿಯಲ್ಲಿ ನಿಲ್ಲುತ್ತಾನೆ. ಹಳ್ಳಿಗರು ಹೇಳುವಂತೆ ಹನುಮ ಊರಹೊರಗಿನ ದೈವ. 'ಊರ ಸುಟ್ಟರೂ ಹನುಮಪ್ಪ ಹೊರಗೆ' ಎಂಬ ಗಾದೆ ಕೂಡ ಕನ್ನಡದಲ್ಲಿದೆ. ಒಂದು ಜನಾಂಗವನ್ನೆ ಕಾಪಾಡುವ ದೈವವೆಂದು ಪರಿಗಣಿತನಾಗಿರುವ ಹನಮ, ಪಟ್ಟಣ ಹಳ್ಳಿಗಳೆನ್ನದೆ ಎಲ್ಲ ಜನರಿಗೆ ಪೂಜೆಗೆ ಬೇಕಾದ ದೈವವಾಗಿದ್ದಾನೆ. ಪಟ್ಟಣಿಗರ ಪಾಲಿಗೂ ಈತ 'ಕೋಟೆಯ ಕಾವಲು ಹನಮಂತ'ನೇ. ಒಟ್ಟಾರೆ ಎಲ್ಲರ ದೃಷ್ಟಿಯಲ್ಲೂ ಹನುಮ ಬಲ, ಸಾಹಸ, ಭಕ್ತಿಗಳ ಪ್ರತೀಕ.

ಹಳ್ಳಿಗರು ಹನುಮನನ್ನು ರೋಗರುಜಿನಗಳಿಂದ ಕಾಪಾಡುವ, ಭೀತಿಯನ್ನು ನಿವಾರಿಸುವ, ಕಾಟ, ಪೀಡೆಗಳಿಂದ ರಕ್ಷಿಸುವ ದೈವವಾಗಿ ಕಾಣುತ್ತಾರೆ ಇದಕ್ಕಾಗಿ ಹನುಮನಿಗೆ ಹರಕೆ ಹೊತ್ತು, ಜೋಯಿಸರು ಹೇಳಿದಂತೆ ದೇವರಿಗೆ ನಡೆದು ಕೊಳ್ಳುತ್ತಾರೆ. ಮಕ್ಕಳಿಗೆ ಕಾಯಿಲೆಯಾದರೆ, ಆರೋಗ್ಯಕ್ಕೆ ಹೆಸರಾದ ಹನುಮನ ತಾಯಿತ ಕಟ್ಟಿಸುವುದು ಸಾಮಾನ್ಯವಾಗಿದೆ. ಕೆಟ್ಟ ಕನಸು ಕಾಣುವ, ನಿದ್ರೆಯಲ್ಲಿ ಕನವರಿಸುವ ಹಿರಿಯ ಕಿರಿಯರು ಮಲಗುವಾಗ ಹನುಮನನ್ನು ಸ್ಮರಿಸಿ ಮಲಗುವುದು ರೂಢಿ. ಜಟ್ಟಿಗಳ ಪ್ರಿಯದೈವ ಹನುಮ. ಕಡೆಗೆ ಮಾಟ ಮದ್ದು ಮಾಡುವವರಿಗೂ ಹನುಮ ಸಹಾಯ ಮಾಡುವನಂತೆ. ಹೀಗೆ ಹೆಸರು ಹೇಳುತ್ತಲೇ ಮೈನವಿರೇಳಿಸುವಂತಹ ಶಕ್ತಿಯುಳ್ಳ ಹನುಮನನ್ನು ಕುರಿತು ಹಳ್ಳಿಗರು ವಿಧ ವಿಧವಾಗಿ ಹಾಡುಗಳನ್ನು ಕಟ್ಟಿ ಹಾಡಿ ಭಕ್ತಿ ತೋರಿದ್ದಾರೆ. ಬಿಡುವು ದೊರೆತಾಗ ಈ ಹನುಮನ ಓಕುಳಿಯಾಡುತ್ತಾರೆ.

ಪ್ರಸ್ತುತ ಹನುಮನನ್ನೂ ಕುರಿತಂತೆ, ದೈವವನ್ನು ಕುರಿತ ಜನಪದ ಗೀತೆಗಳ ವಸ್ತು ಮುಖ್ಯವಾಗಿ ಆ ದೈವಗಳ ಮಹಿಮೆ, ಉದ್ಭವ, ಮಹತ್ವ ಇತ್ಯಾದಿಗಳನ್ನು ಕುರಿತದ್ದು. ಹಳ್ಳಿಗರಪಾಲಿಗೆ ಈ ದೈವಗಳು ತಾಯಿ, ತಂದೆ, ಅಣ್ಣ, ತಮ್ಮ, ಅಕ್ಕ ತಂಗಿಯರಷ್ಟು ನಿಕಟ. ತಮಗೆ ಅತಿ ಸಮೀಪರಾದ ಈ ದೈವಗಳನ್ನು ಕಾಡಿಬೇಡಿ ತಮ್ಮ ಕಷ್ಟಗಳನ್ನೆಲ್ಲ ಪರಿಹರಿಸಿಕೊಳ್ಳಬಹುದೆಂಬ ನಂಬಿಕೆ ಅವರಿಗಿದೆ. ಅವರ ಪ್ರಕಾರ ಮನುಷ್ಯನ ಗುಣಗಳೆಲ್ಲವನ್ನು ಹೊಂದಿಯೂ ಮೇಲೇರಿದ ಅತಿಮಾನವರು ಈ ದೈವಗಳು.

ರಾಮಾಯಣ ಎಂದೊಡನೆ ಅಪ್ರತಿಮ ವೀರನಾದ ಹನುಮನ ನೆನಪು ಯಾರಿಗಾದರೂ ಬರುತ್ತದೆ. ಜನಪದಗೀತೆಗಳಲ್ಲಿ ಚಿತ್ರಿತನಾಗಿರುವ ಹನುಮ, ಶಿಷ್ಟಕಾವ್ಯಗಳಲ್ಲಿನ ಹನುಮನಿಗಿಂತ ಒಂದು ಕೈಮಿಗಿಲಾಗಿಯೇ ಇದ್ದಾನೆ. ಜನಪದ ರಾಮಾಯಣಗಳಲ್ಲಾಗಲೀ, ರಾಮಾಯಣವನ್ನು ಕುರಿತ ಜನಪದ ಬಿಡಿಗೀತೆಗಳಲ್ಲಾಗಲೀ, ಸೀತೆಯನ್ನು ರಾವಣನ ಸೆರೆಯಿಂದ ಬಿಡಿಸಿದ ಪೂರ್ಣ ಗೌರವ ಹನುಮನಿಗೆ ಸಂದಿದೆ. ಹನುಮನ ಶಕ್ತಿ ಸಾಹಸ, ಜಾಣತನಗಳ ಮುಂದೆ ರಾಮ ರಾವಣರಂತಹ ಪರಾಕ್ರಮಿಗಳ ವರ್ಚಸ್ಸೂ ಮಸಕಾಗಿ ಕಾಣಿಸುತ್ತದೆ.

ಸೀತಾಪಹರಣದ ನಂತರ, ಸೀತೆಗೆ ಬಂದೊದಗುವ ದುಃಸ್ಥಿತಿಯಲ್ಲಿ ಭಾಗಿಯಾಗಿ, ಸೀತೆಗೆ ಸಮಾಧಾನ ತರುವವನು ಹನುಮನೇ. ಸೀತೆಯನ್ನು ರಾವಣ ಕದ್ದೊಯ್ದಾಗ "ಗಗನಕ್ಕೆ ಎಗರುವೆ, ಮುಚ್ಚರಿಸಿ ರಾವಣನ ಗರ್ವವ ಮುರಿದು" ಸೀತೆಯನ್ನು ಬಿಡಿಸಿ ತರುವೆನೆಂದು ರಾಮನ ಮುಂದೆ ವಾಗ್ದಾನ ಮಾಡಿ, ರಾಮನನ್ನು ಸಂತೈಸಿ ಲಂಕೆಗೆ ಹೊರಟ ಹನುಮನ ಚಿತ್ರವಿದು:

ಡೊಂಕು ಮೋರಿಯ ಹನುಮ, ಲಂಕಾಕ
ಬಲುಚೆಲುವ
ಟೊಂಕದ ಮ್ಯಾಲೆ ಎಡಗೈಯ ಇಟಕೊಂಡು
ಲಂಕಾಕ ಲಾಗ ಒಗೆದಾನೊ

ಲಂಕೆಗೆ ಹಾರುವುದು ಹನುಮನ ಪಾಲಿಗೆ ಇಷ್ಟು ಸುಲಭದ ಕೆಲಸವಾದ ಮೇಲೆ ಅವನ ಶಕ್ತಿಗೆ ಎಣೆ ಉಂಟೇ! ಆತ ಹಾರಿದೊಡನೆ,

ಒಂದಾಕಾಶ ನಡಿಗ್ಯಾವು, ಭೂಮಿತಲ್ಲಣಿಸ್ಯಾವು
ಕರಿಕರಿ ಬೆಟ್ಟಗಳು ತಲೆ ಕೆಳಕನಾದಾವು

ಈ ಪುಟ್ಟಕಪಿ ರಾವಣನ ದೃಷ್ಟಿಯಲ್ಲಿ ಬಹಳ ನಿಕೃಷ್ಟವಾದುದು. ಆದ್ದರಿಂದ ಹನುಮನನ್ನು ನೋಡುತ್ತಲೇ ನಗುತ್ತ " ಈ ಗೇಣುದ್ದ ಕಪಿಯು ಚೋಟುದ್ದ ಹೂಬಾಲ, ಲಂಡನಿವನ್ಯಾರೆಂದು" ಕೇಳಿದ. ಆಗ ಹನುಮ ಕೊಡುವ ದಿಟ್ಟ ಉತ್ತರ ಕೇಳಿ ರಾವಣನಿಗೆ ಕುಚೋದ್ಯ ಮಾಡಬೇಕೆನಿಸಿತು.

**ಶ್ರೀಮತಿ ಎನ್. ಪುಷ್ಪ**

"ಎಕ್ಕೆ ಕೋಡಗ, ನಿನ್ನ ಸಾಹಸ ವೆಷ್ಟೆಲೊ ತಮ್ಮ ಶ್ರೇಷ್ಠ ಬಲ್ಲಿದನಹುದು, ಸಮರ್ಥನೀನಹುದು, ಸೀತೆ ಒಯ್ಯುವಾಗ ನೀನೆಲ್ಲಿದ್ದ್ಯಲೊ" ಎಂದು ಕೇಳಿದ ಅದಕ್ಕೆ ಹನುಮ ನೀಡಿದ ಉತ್ತರ ರಾವಣನನ್ನೆ ಬೆರಗು ಮಾಡಿತು;

ಸೀತೆ ನೀನೊಯ್ಯಾಗ ನೀನಿದ್ದಂಗೆ ನಾನಿದ್ದರೆ
ಗುದ್ದಿ ಕೊಲ್ಲುತಿದ್ದೆ ನಿನ್ನ ರಥದ ಮೇಲೆ
ಕಾಲಲಿ ವದ್ದೆ ಕೊಲ್ಲುತಿದ್ದೆ, ನಿನ್ನ
ಎದೆಯ ಮೇಲೆ

ಇಷ್ಟು ಹೇಳಿದ್ದಲ್ಲದೆ, 'ಗಂಡನುಳ್ಳಮ್ಮನ ತಂದು ವನದೊಳಗಿಟ್ಟೆ, ದಂಡ ತರತೀನಿ ಸೈರಿಸಣ್ಣಯ್ಯ' ಎಂದು ಎಚ್ಚರಿಕೆ ಬೇರೆ ನೀಡಿದ.

ಹನುಮ ಶ್ರೀರಾಮ ಭಕ್ತನಾದರೂ, ರಾಮನಿಗಿಂತ ಹಿರಿಯ., ರಾವಣ ಸೀತೆಯನ್ನಪಹರಿಸಿದಾಗ ರಾಮ ಚಿಕ್ಕವನಾದ್ದರಿಂದ, ಅವನ ಕಾರ್ಯವನ್ನು ಹನುಮನೇ ಮಾಡಬೇಕಾಯಿತೆಂದು ಹೇಳುವ ತ್ರಿಪದಿ ಇದು:

ಸೀತನ್ನ ಒಯ್ದ್ಯಾಗ ಶ್ರೀರಾಮ ಸಣ್ಣವ
ಆಗ ಹನುಮಂತ ಹೊಸಮಗ ತಾ ಕೂತು
ಸೀತೆಯ ಸೆರಗ ಬಿಡಿಸ್ಯಾನ



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಲಂಕೆಯಲ್ಲಿ ಸೀತೆಯನ್ನೂ, ಅವಳ ಪಾತಿವ್ರ ವನ್ನೂ ಕಾದವನು ಹನುಮನೇ

ಹೊತ್ತು ಮುಣಗಿತೋ, ಕತ್ತಲಾಯಿತೋ
ಲೆಂಕ ಹನುಮನ ಕಾವಲೊ
ಬೆಳ್ಳಿ ಮೂಡಿತೊ ಬೆಳಗಾಯಿತೊ
ಸೂರ್ಯ ಚಂದ್ರರ ಕಾವಲೊ

ಶ್ರೀರಾಮನ ಉಂಗುರ ತಲುಪಿಸಿ ಸೀತೆಗೆ ಬದ ನಲ್ಲಿ ಆಶೆಯ ಚಿಗುರನ್ನು ಮೂಡಿಸಿದವ ಹನುಮನ ಅಶೋಕವನದಲ್ಲಿ ಕುಳಿತ ಸೀತೆಯನ್ನು ಸಂತೈ ವಲ್ಲಿ ಹನುಮನ ಪಾತ್ರವೇನು ಎಂದು ಹೇಳ ಜನಪದ ಕಥನಗೀತೆಯೊಂದಿದೆ. ಸುಂದರವಾ ಈ ಗೀತೆಯ ಹೆಸರು 'ಹನುಮ–ಕೊರವಂಜಿ".

ಲಂಕೆಯನ್ನು ಪ್ರವೇಶಿಸಿದ ಹನುಮನಿಗೆ ವ್ಯಾ ವದನಳಾಗಿ ಕುಳಿತಿದ್ದ ಸೀತೆಯನ್ನು ಕಂಡು, ಕರು ಉಕ್ಕಿ ಬಂದು, ಹೇಗಾದರೂ ಸಂತೈಸಬೇಕೆಂ ಮನಸ್ಸಾಯಿತಂತೆ. ಆದ್ದರಿಂದ ಕೊರವಂಜಿ ವೇ ಧರಿಸಿದ. ಕೊರವಂಜಿ ವೇಷದ ಹನುಮನ ಚಿ ವಿದು

ಎಣ್ಣೆ ಮಜ್ಜನವಾನೆ ಮಾಡಿ ಮುದದಿಂದ
ಕಣ್ಣಿಗಂಜನ ಹಾಕಿ ಕಸ್ತುರಿಯ ಬಟ್ಟೆಟ್ಟೊ
ಎಗ್ಗನಾದ ಕಮಲದ ಕಂಚುಕವನೆ ತೊಟ್ಟು
ಕಿರುಪಿಲ್ಲಿ ಮಿಂಟಿಕೇ ಮುದ್ರಿಕೇ ನಿಟ್ಟು

ಇಷ್ಟು ಅಲಂಕರಿಸಿ ಕೊಂಡ ಕೊರವಂಜಿ 'ಕಾರು ಮರಿಯಾನೆಯಂತೆ' ಕಾಣುತ್ತಿದ್ದಳು. ಕೋಕಿ ಸ್ವರದಲ್ಲಿ ಸೀತೆಯ ಬಳಿ ಹೋಗಿ ತಾನು ಕರ್ನಾಟ ದೇಶದವಳೆಂದು ಸಾರಿ, ಸೀತೆಯ ಪೂರ್ವೋತ್ತ ಳನ್ನು ಹೇಳಿ, ದುಃಖಿಸಬೇಡ, ಸಧ್ಯದಲ್ಲೇ ರಾಮ ನಿನ್ನ ಬಳಿ ಬಂದು ಒಳೈಯದು ಮಾ ತ್ತಾನೆಂದು ಭವಿಷ್ಯನುಡಿದು. ಸಂತೈಸಿದಳು.

ಅಡವಿಯಾ ಕಪಿಗೂಡಿ ನಡೆತರುವ ಕೇಳೇ
ಕಡಲದಾಟುವ ನಿನ್ನ ಮನಸಿನಾಳವ ತಿಳಿದು
ಒಡನೆ ರಾವಣನನ್ನು ಸದೆ ಬಡಿವ ಮಿತ್ರೇ
ಕೇ
ಪೊಡವಿಯಾಳುವ ನಿನ್ನ ಒಡಗೂಡಿ ಬಾಲೆ

ರಾವಣನೊಂದಿಗೆ ರಾಮನಿಗಿಂತ ಹೆಚ್ಚಾ ಯುದ್ಧ ಮಾಡಿದವನು ಹನುಮನೇ. ಹನುಮ ಇ ಲಂಕೆಯನ್ನು ಸುಟ್ಟ ಚಿತ್ರವನ್ನು ಜನಪದ ಕವಿಗ ತಮ್ಮ ಅನುಭವದ ಮಿತಿಯಲ್ಲಿ ಚಿತ್ರಿಸಿರುವರಿ ಯಿದು.

ಮಾಳಿಗೆ ಮನೆಸುಟ್ಟು ಅಂಗಂಗಡಿ ಸುಟ್ಟು
ಅಂದನ ರಾವಣನ ಎಳೆಮೀಸೆ–ಗಡ್ಡ ಸುಟ್ಟು
ಬಂದು ರಾಮರಿಗೆ ಶರಣೆಂದ

ಇದು ಬಿಡಿಯಾಗಿ ಸಿಗುವ ಜನಪದ ಗೀತೆಗಳಲ್ಲ ಹನುಮನ ಚಿತ್ರ.

ಇನ್ನು, ರಾಮಾಯಣವನ್ನು ಓದು, ಹಾಗೆಯೇ ಚಿತ್ರಿತನಾಗಿರುವ ಹನುಮನ ಚಿತ್ರವನ್ನು ನೋಡಬಹುದು. ಊರನ್ನು ಸದಾ ಕಾಯುವ ಹನುಮನ ಚಿತ್ರವಿದು:

ಊರಮುಂದಿರುವೋನೆ ವೀರನೆ ಶೂರನೆ
ನೀಲಿಯ ನಾಮದ ಒಡೆಯನೆ ಹನುಮನೆ
ನೀರಿಗ್ಹೋಗುತ ಕೈಯ ಮುಗಿದೇವು

ಎಚ್ಚರವಿದ್ದಾಗ, ಅರೆನಿದ್ರೆಯಲ್ಲಿರುವಾಗ ಒಟ್ಟಿನಲ್ಲಿ ದಿನವಿಡೀ ಸ್ಮರಣೆ ಬಂದಾಗೆಲ್ಲ ಹನುಮನ ಧ್ಯಾನ ಮಾಡುತ್ತಿದ್ದರೆ, ಮಾಡಿದ ಪಾಪಗಳೆಲ್ಲ ಪರಿಹಾರ ವಾಗುತ್ತದಂತೆ. ಹನುಮ ಮನಸ್ಸು ಮಾಡಿದರೆ ಬೇಕಾದ ವರವನ್ನು ನೀಡಬಲ್ಲ:

ಗಂಡುಮಕ್ಕಳ ಬೇಡಿ, ಬಿಂದಿಗ್ಹೊನ್ನ ಬೇಡಿ
ಚಿನ್ನದ ಕುವಾಲಿ ಹನುಮಯ್ಯ ಬೇಡಿದರೆ
ಬೇಡಿದ ವರವ ಕೊಡುತಾನೆ

ಇಂತಹ ಮಹಾತ್ಮನಾದ ಹನುಮನ ರೂಪವಾದರೂ ಏನು !

ಹಚ್ಚನ್ನ ಹರಿನಾಮ, ಮುತ್ತಿನ ಗೋಪಾಳ
ಹೊತ್ತೇರಿ ಬರುವ ಇವನ್ಯಾರೋ ಕೇರೂರ
ಗಚ್ಚೀನ ಗುಡಿಯ ಕರಿಹನುಮಾ

ಗಾಳಿ, ಪಿಶಾಚಿಗಳಿಂದ ಬಿಡುಗಡೆ ಹೊಂದಲು "ಹದ್ದಿನ ಕಲ್ಲ" ಹನುಮನ ಬಳಿ ಜನ ವಿಶೇಷವಾಗಿ ಹೋಗುತ್ತಾರೆ. ಮಹಾಮಹಿಮಶಾಲಿಯಾದ ಹನುಮ ವಾಸಿಸುವ ಸ್ಥಳವಾವುದೆಂದರೆ

ಅಪ್ಪನ ಸಾಲಿನಲ್ಲಿ ತುಪ್ಪದ ಗೆಜ್ಜೆ ಸರ
ಅಪ್ಪಾಜಿ ಅವನೆ ಗಿರಿಮ್ಯಾಲೆ–ಹನುಮಯ್ಯ
ಇಪ್ಪತ್ತು ಅಂಗಳದ ಗರುಡೀಲಿ

ಇಂತಹ ಹನುಮಂತನನ್ನು ಸ್ವಾಗತಿಸಲು ಭರ್ಜರಿ ತಯಾರಿ ಆಗತ್ಯ–

ಬಾಳೆಯ ಎಲೆ ಮೇಲೆ ಭಗವಂತ ಮಗಬಂದ
ಏಳಿ ನನ್ನಪ್ಪ ದೊರೆ ಬಂದ–ಹನುಮಯ್ಯ
ಪಾದಕ ಪನ್ನೀರ ಹಿಡಿಯುವ

ಹನುಮನ ಪೂಜೆ ಮಾಡುವ ರೀತಿಯಿದು

ಹನುಮಾನ ಪೂಜೆಗೆ ಏನೇನು ಐಭೋಗ
ಜೇನು ತಪ್ಪದ ಅಭಿಷೇಕ–ಹನುಮಗೆ
ಹಾಲು ಅನ್ನದ ನೈವೇದ್ಯ

ಹನುಮನಿಗೂ, ಹಳ್ಳಿಯ ಜನಕ್ಕೂ ಬಹಳನಂಟು. ಅವರಿಬ್ಬರ ಸಂಬಂಧ ಬಹಳ ನಿಕಟ. ಆದ್ದರಿಂದ ಪರಸ್ಪರ ಸಲಿಗೆ ಬಹಳ ಜಾಸ್ತಿ. ಇದನ್ನೇ ಕೆಳಗಿನ ತ್ರಿಪದಿಗಳು ಹೇಳುತ್ತವೆ.

ಪಟ್ಟೆ ಜೋತುರಕೆ ಊದಾರಿ ಮಡಿಲಕ್ಕಿ
ಊರಗೌಡರ ಮನೆ ಮುಂದೆ ಹನುಮಯ್ಯ
ಹೂವಿನಾನೆ ಜೋಡಿ ಮುನಿದಾನೆ
ಮಲ್ಲಿಗೆ ಹೂವಿನಲಿ ಮಲ್ಲಿಯ ನೇಯಿಸಿವೆ
ಒಲ್ಲನಲ್ಲೆ ನಮ್ಮ ಮನೆಸ್ವಾಮಿ–ಹನುಮಯ್ಯ
ಮಲ್ಲಿಯ ಮುಂಜೆಂಗು ನೆನೆದಾವು

ಹನುಮನ ಪರಾಕ್ರಮ ಅರ್ಜುನನಿಗಿಂತ ಮಿಗಿಲಂತೆ. ಅವನ ಶಕ್ತಿಗೆ ದ್ಯೋತಕವಾಗಿ "ಹನುಮಂತ–ಅರ್ಜುನರ ವಾಗ್ವಾದ" ಎಂಬ ಸುಂದರವಾದ ಕಥನಗೀತೆಯೊಂದು ಜನಪದ ಸಾಹಿತ್ಯದಲ್ಲಿದೆ. ಈ ವಾಗ್ವಾದ ರಂಜನೀಯವೂ, ಹಾಸ್ಯಮಯವೂ ಆಗಿದ್ದು ಓದುಗರನ್ನು ಆಕರ್ಷಿಸುತ್ತದೆ. ಎಲ್ಲ ದೈವಗಳೂ ಒಂದೇ. ಅರ್ಜುನನಿಗಿಂತ ಹನುಮ ಶಕ್ತಿಶಾಲಿ ಎಂದು ಸಾರುವುದೇ ಈ ಕಥನಗೀತೆಯ ಉದ್ದೇಶ.

ಶ್ರೀರಾಮ ಹೆಚ್ಚೋ, ಕೃಷ್ಣ ಹೆಚ್ಚೋ ಎಂಬ ವಿಚಾರದಲ್ಲಿ ಒಂದುದಿನ ಮಾರುತಿ ಮತ್ತು ಅರ್ಜುನರಿಗೆ ವಾಗ್ವಾದ ಶುರುವಾಯಿತಂತೆ. ಮಾರುತಿ, ಅರ್ಜುನನ ಮುಂದೆ ರಾಮನನ್ನು ಹೊಗಳಿ ಕೃಷ್ಣನನ್ನು ನಿಂದಿಸತೊಡಗಿದ.

ಕೇಳೋ ಫಲ್ಗುಣ ನಿಮ್ಮ ಕೃಷ್ಣಂದು
ಹೇಳಬ್ಯಾಡ ದೊಡ್ಡಸ್ತನ
ಮಥುರೆಯೊಳು ಹುಟ್ಟಿ ಜರಾಸಂಧಗಂಜಿ
ಗೋಕುಲ ಸೇರಿದ ಬೇಮಾನಾ
ಗೋಪ್ಯಾರ ಮನಿಯೊಳು ಕಳವು ಮಾಡಿದನು
ವರಳಕಲ್ಲಿಗೆ ಕಟ್ಟಿದರವನ್ನಾ
ಕೆಟ್ಟ ಬುದ್ಧಿ ಸೇರಿತ ಅವ ಕಾಯುತಿದ್ದ
ಗೋಪ್ಯಾರ ದನಾ.........

ಹೀಗೇ ಮುಂದುವರಿಯುತ್ತ ಹರಿ ಒಂದು ವಚನದವನಲ್ಲ, ಹಡೆದ ತಂದೆ ತಾಯಿಯರನ್ನಾಕ ನಂಬಲಿಲ್ಲ, ಪತಿವ್ರತಾಧರ್ಮ ಅವನಿಗಿಲ್ಲ. ಇಂತಹ ಕೃಷ್ಣನನ್ನು ದೊಡ್ಡ ದೈವವೆಂದು ಹೊಗಳಿ "ಕಿಸಿಬ್ಯಾಡ ಹಲ್ಲ" ಎಂದು ಅರ್ಜುನನನ್ನೆ ತರಾಟೆಗೆ ತೆಗೆದುಕೊಂಡ.

ಶ್ರೀಕೃಷ್ಣನ ಪರಮಭಕ್ತನಾದ ಅರ್ಜುನನಿಗೆ ಕೃಷ್ಣನಿಂದೆಯನ್ನು ಸಹಿಸಲಾಗಲಿಲ್ಲ. ಮಾರುತಿಯ ಮುಂದೆ ರಾಮನನ್ನು ನಿಂದಿಸಲಾರಂಭಿಸಿದ

ಎಲೋ ಮಾರುತಿ, ನಿನ್ನ ರಾಮ
ಯಾವ ಗಂಭೀರಾ
ದಶರಥ ರಾಜನ ಮಣ್ಣಿಗಾಗಲಿಲ್ಲೊ
ಮರುಗಿಸತ್ತನು ಮರಾಮರಾ
ವನವಾಸ ಕ್ಹೋದಲ್ಲಿ ಸೀತಾನ ಕಳಕೊಂಡ
ಅದರಸತಿದ್ದ ಕಣ್ಣೀರಾ
ಸೀತಾ ಸೀತಾ ಅಂತ ಗುಡ್ಡ ಗಂವ್ಹಾರ
ಗಂವ್ಹಾರ ಹುಡುಕಿ ಬೇಖಬರಾ
ಚಂದ್ರಕೇನಾಸಂತೇಲೆ ನಿನ್ನ ಕಳುಹಿದ
ಅಲ್ಯಾಕ ಕಳುಹಿದನು ರಘುವೀರಾ
ನಿನ್ನ ರಾಮಚಂದ್ರನು ಯಾವ ಪುಂಡ,
ಲವಕುಶರಿಗಾದನು ಭಂಡಾ... . ......

ಇಷ್ಟಂದಿದ್ದಲ್ಲದೆ, ರಾಮ ಬಿಟ್ಟ ಹೆಂಡತಿಯನ್ನು ಕರೆದುಕೊಂಡವ. 'ರಾವಣಗಂಜಿ ಶಕ್ತಿಸ್ತುತಿಸಿದಾ' ಇತ್ಯಾದಿಯಾಗಿ ನಿಂದಿಸಿದ. ಮಾರುತಿ ರಾಮನಿಂದೆಯನ್ನು ಕೇಳಲಾಗದೆ, ಅವನ ಗುಣಗಾನಮಾಡಿ, ಪ್ರತಿಯಾಗಿ ಕೃಷ್ಣನಿಂದೆ ಮಾಡಿ ಸೇಡುತೀರಿಸಿಕೊಳ್ಳಹೋದ. ಅರ್ಜುನನ ಪ್ರತಿನಿಂದೆಯ ಮುಂದೆ ಅವನಿಗೇನೂ ಮಾಡಲಾಗಲಿಲ್ಲ. ಯಾವಾಗ ಅರ್ಜುನ "ಕಲ್ಲಿನ ಸೇತುವೆ ಕಟ್ಟೋದಕ ರಾಮಗ ನಾಚಿಕೆ ಬರಲಿಲ್ಲೇನೊ ನಪುಂಸಕಗ" ಎಂದು ರಾಮನನ್ನು ಜರಿದನೋ ಆಗ ಹನುಮನ ಸಿಟ್ಟು ಮಿತಿಮೀರಿತು. ಶಕ್ತಿಪ್ರದರ್ಶನಕ್ಕೆ ತೊಡಗಿದ. ಶಕ್ತಿಯಿದ್ದರೆ ಈ ಬಾಣವನ್ನು ಮುರಿ ಎಂದು ರಾಮ ಬಾಣ ನೀಡಿ ಸವಾಲೆಸೆದ.

ಒಂದು ಬಾಣ ಮುರಿವುದೇನು ಕಷ್ಟ? ಮುಂದೇ ಮುರಿಯುವೆ,ಇಲ್ಲದಿದ್ದರೆ ಅಗ್ನಿಗೆ ಆಹುತಿಯಾಗುವೆ ಎಂದು ಅರ್ಜುನ ಪಣತೊಟ್ಟ. ಎಷ್ಟು ಯತ್ನಿಸಿದರೂ ಬಾಣ ಮುರಿಯಲಾಗಲಿಲ್ಲ. ಆಗ ಮಾರುತಿ ನಗುತ್ತ 'ರೌದ್ರಾವತಾರ ತಾಳಿ'ತಾನೇ ಮುರಿದ. ಅರ್ಜುನನಿಗೆ ಗರ್ವಭಂಗವಾಯ್ತು. ಅಗ್ನಿಗೆ ಜಿಗಿಯಲು ಸಿದ್ಧನಾದ. ಆಗ ಕೃಷ್ಣ ಪ್ರತ್ಯಕ್ಷನಾಗಿ ಇಬ್ಬರನ್ನೂ ಸಂತೈಸಿ 'ರಾಮಕೃಷ್ಣರಿಬ್ಬರೂ ಒಂದೇ' ಎಂಬ ತತ್ತ್ವವನ್ನು ಮನದಟ್ಟು ಮಾಡಿಸಿ ಸಂತೈಸಿದ.

ಸ್ವತಃ ವಿಶಿಷ್ಟವಾದ,ಆಕರ್ಷಕವಾದ,ಗುಣಗಳನ್ನು ಹೊಂದಿರುವ ಹನುಮನ ವ್ಯಕ್ತಿತ್ವವೇ ಎಲ್ಲರೂ ಹನುಮನನ್ನು ಬಯಸಿ ಪೂಜಿಸಲು ಕಾರಣವೆನಿಸುತ್ತದೆ. ಒಟ್ಟಿನಲ್ಲಿ ರಾಮಾಯಣವಿರುವ ತನಕ ಹನುಮ ಸ್ಮೃತಿ ಯಾರಿಂದಲೂ ಮರೆಯಾಗದ್ದೆನಿಸುತ್ತದೆ.

———

# ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ಗರುಡಾದ್ರಿನಗರ ಕಾಟೇಜುಗಳು

ಪ್ರತಿ ಅಂತಸ್ತಿನಲ್ಲೂ 4 ಸೂಟ್‌ಗಳಿರುವಂತೆ ಎರಡು ಅಂತಸ್ತುಗಳ 18 ಕಾಟೇಜುಗಳನ್ನು ತಿ.ತಿ.ದೇ. ನಿರ್ಮಿಸುತ್ತಿದೆ.

* ಪ್ರತಿ ಸೂಟ್ ಸಹ 10'×12' ಗಳ ಒಂದು ಕೋಣೆ ಹಾಗೂ ಹೊಂದಿಕೊಂಡ ಶೌಚಗೃಹ, ಸಾಮಾನ್ಯ ವೆರಾಂಡಾವನ್ನು ಹೊಂದಿರುತ್ತದೆ.
* 30000 ರೂಗಳ ದಾನದಿಂದ ಒಬ್ಬರು 320 ಚದರಡಿ ಪ್ಲಿಂತ್ ಏರಿಯಾದ ಒಂದು ಸೂಟನ್ನು ತಮ್ಮ ಹೆಸರಿನಲ್ಲಿ ಕಟ್ಟಿಸಬಹುದು. ಅಪೇಕ್ಷೆಪಟ್ಟಲ್ಲಿ 8 ಸೂಟ್‌ಗಳ ಇಡೀ ಕಾಟೇಜನ್ನು 2 4 ಲಕ್ಷ ರೂಗಳ ದಾನದ ಮೂಲಕ ಅಥವಾ 4 ಸೂಟ್‌ಗಳನ್ನು 1.2 ಲಕ್ಷ ರೂಗಳ ದಾನದ ಮೂಲಕ ಅಥವಾ 60000 ರೂಗಳ ದಾನದ ಮೂಲಕ 2 ಸೂಟ್‌ಗಳನ್ನು ನಿರ್ಮಿಸಬಹುದು.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಪುರಾಣ ಸಾಹಿತ್ಯ

ವೇದ, ಪುರಾಣ, ಇತಿಹಾಸಗಳು ಭಾರತೀಯ ಸಂಸ್ಕೃತಿಯ ಶ್ರೇಷ್ಠ ಸಾಹಿತ್ಯವೆಂದು ಪ್ರಸಿದ್ಧವಾಗಿವೆ. ವೇದಗಳ ಮಹತ್ವವನ್ನು ತಿಳಿಸುವುದಕ್ಕೆ ಪುರಾಣಗಳ ರಚನೆ ಆದುವು. ವೇದಾಂತ ತತ್ತ್ವಗಳು ಪುರಾಣಗಳಲ್ಲಿ ಪ್ರತಿಪಾದಿತವಾಗಿವೆ. ಭಾಷಾಶಾಸ್ತ್ರ ರೀತಿಯಾಗಿ ಪುರಾಣ ಎಂದರೆ ಹಳೆಯದು ಅಥವ ಪ್ರಾಚೀನವಾದುದು ಎಂದು. ಕಳೆದು ಹೋದ ಸಂಗತಿಗಳನ್ನು ಕಥಾರೂಪದಲ್ಲಿ ಮತ್ತು ಆಕರ್ಷಕರೂಪದಲ್ಲಿ ವಿವರಿಸುವುದು ಎಂದರ್ಥ. ಪುರಾಣಗಳು ವೇದಗಳಂತೆ ವಂಶಪಾರಂಪರ್ಯವಾಗಿ ಬರುತ್ತಿದ್ದವು. ವೇದಗಳ ಕಾಲದಲ್ಲಿಯೇ ಇವುಗಳಿಗೆ ನಿರ್ದಿಷ್ಟವಾದ ಸ್ವತಂತ್ರಸ್ಥಾನ ದೊರೆಯಿತು.

ಪುನಸ್ಸೃಷ್ಟಿ, ವಂಶಾವಳಿ, ಮನುಗಳ ಕಾಲ, ರಾಜ ವಂಶವೃಕ್ಷ, ಮುಂತಾದುವನ್ನು ವಿವರಿಸುವುದು ಪುರಾಣಗಳ ಲಕ್ಷಣ ಎಂದು ಅಮರಸಿಂಹಕವಿ ತಿಳಿಸಿದ್ದಾನೆ. ಆದರೆ ಈ ಎಲ್ಲ ಲಕ್ಷಣಗಳೂ ಎಲ್ಲ ಪುರಾಣಗಳಲ್ಲಿ ದೊರೆಯುವುದಿಲ್ಲ. ಕೆಲವು ಪುರಾಣಗಳಲ್ಲಿ ಇವಕ್ಕಿಂತ ಹೆಚ್ಚಿನ ಲಕ್ಷಣಗಳು ಇವೆ. ದೈವ ಶ್ರದ್ಧೆ ಮತಶ್ರದ್ಧೆ, ಉಪದೇಶಾದಿ ಲಕ್ಷಣಗಳು ಕೆಲವು ಪುರಾಣಗಳಲ್ಲಿದ್ದರೆ, ಇನ್ನು ಕೆಲವುಗಳಲ್ಲಿ ವೃತ್ತಿ, ಅವತಾರ ಮೋಕ್ಷ, ಅದೃಷ್ಟ–ಇತ್ಯಾದ ಲಕ್ಷಣಗಳು ಇವೆ. ಒಟ್ಟಿನಲ್ಲಿ ಪುರಾಣಗಳು ದಶ ಲಕ್ಷಣಗಳನ್ನು ಹೊಂದಿವೆ ಎಂದು ತಿಳಿಸಲಾಗಿದೆ. ಧರ್ಮ, ಅರ್ಥ, ಕಾಮ, ಮೋಕ್ಷ, ಪ್ರಜಾರಕ್ಷಣೆ, ಪ್ರಳಯ–ಇತ್ಯಾದಿ ವಿಷಯಗಳೆಲ್ಲ ಪುರಾಣಗಳಲ್ಲಿ ನಿರೂಪಿತವಾಗಿವೆ ಒಟ್ಟಿನಲ್ಲಿ ಪುರಾಣೋಕ್ತ ವಿಷಯಗಳು ಇಷ್ಟೇ ಎಂದು ನಿರ್ಧರಿಸುವುದು ಕಷ್ಟ.

ಪುರಾಣಗಳಲ್ಲಿ ಮಹಾಪುರಾಣ ಉಪಪುರಾಣ ಎಂದು ಎರಡು ವಿಧ. ಮಹಾ ಮಹಾಪುರಾಣಗಳು ಹದಿನೆಂಟು. ಉಪಪುರಾಣಗಳು ಇಪ್ಪತ್ತು ಎಂದು ತಿಳಿಸಲಾಗಿದೆ. ಇಷ್ಟು ಬೃಹತ್ ಪ್ರಮಾಣದ ಧಾರ್ಮಿಕ ಸಾಹಿತ್ಯವು ಇನ್ನು ಯಾವದೇಶದಲ್ಲಿಯೂ ಇಲ್ಲವೆಂದೇ ಹೇಳಬಹುದು. ಮಹಾಪುರಾಣಗಳಲ್ಲಿ ಐದು ಲಕ್ಷ ಶ್ಲೋಕಗಳಿವೆ. ಉಪಪುರಾಣಗಳೂ ಸೇರಿದರೆ, ಒಟ್ಟು ಸುಮಾರು ಆರೂಕಾಲು ಲಕ್ಷ ಶ್ಲೋಕಗಳಿವೆ. ಮಹಾಪುರಾಣಗಳನ್ನು ಸಾತ್ತ್ವಿಕ, ತಾಮಸ, ರಾಜಸ ಎಂದು ವಿಂಗಡಿಸಲಾಗಿದೆ. ಹರಿಪ್ರಸಾದಶಾಸ್ತ್ರಿ ಎಂಬ ವಿದ್ವಾಂಸರ ಪುರಾಣಗಳನ್ನು ಸಮರ್ಪಕ ರೀತಿಯಲ್ಲಿ ಹೀಗೆ ವಿಂಗಡಿಸಿದ್ದಾರೆ.

1) ವಿಶ್ವಕೋಶದಂತೆ, ಸಂಸ್ಕೃತಿ, ಸಾಹಿತ್ಯ, ಕಲೆ, ವಿಜ್ಞಾನ–ಇತ್ಯಾದಿ ವಿಷಯಗಳನ್ನು ಒಳಗೊಂಡ ಪುರಾಣಗಳು– ಅಗ್ನಿ, ಗರುಡ, ನಾರದ ಪುರಾಣಗಳು.

2) ಕ್ಷೇತ್ರ, ತೀರ್ಥ, ವ್ರತಾದಿ ವಿಷಯಗಳನ್ನು ನಿರೂಪಿಸತಕ್ಕವು–ಪದ್ಮ, ಸ್ಕಂಧ ಭವಿಷ್ಯ ಪುರಾಣಗಳು.

3) ಮಹಾಕಥಾನಿರೂಪಣೆ ಮತ್ತು ಪ್ರಾರಂಭ ಮತ್ತು ಕೊನೆಯಲ್ಲಿ ಪುನರಾವರ್ತಿಯಾಗಿ ಹೇಳುವ ಪುರಾಣಗಳು – ಬ್ರಹ್ಮ, ಭಾಗವತ ಮತ್ತು ಬ್ರಹ್ಮವೈವರ್ತ.

4) ಇತಿಹಾಸರೂಪದ ಕಥೆಗಳನ್ನು ನಿರೂಪಿಸತಕ್ಕ – ಬ್ರಹ್ಮಾಂಡ, ವಾಯು ಪುರಾಣಗಳು.

5) ವಂಶಾನುಗುಣ ವಿಷಯಗಳನ್ನು ತಿಳಿಸತಕ್ಕ – ಲಿಂಗ, ವಾಮನ, ಮಾರ್ಕಂಡೇಯ ಪುರಾಣಗಳು.

6) ಅವತಾರ ಕಥಾನಿರೂಪಣೆ ಮಾಡುವ ಮತ್ಸ್ಯ, ಕೂರ್ಮ, ವರಾಹ ಪುರಾಣಗಳು.

ಅಷ್ಟಾದಶ ಪುರಾಣಗಳ ಪ್ರಮಾಣ ಹೀಗಿದೆ. ಬ್ರಹ್ಮಾಂಡ – 10,000 ಶ್ಲೋಕಗಳು. ಪದ್ಮ 50 000, ವಿಷ್ಣು 23,000, ಶಿವ 24 000, ಭಾಗವತ 18,000, ನಾರದ 25,000, ಮಾರ್ಕಂಡೇಯ 9.000, ಅಗ್ನಿ 10,000, ಭವಿಷ್ಯ 4,000, ಬ್ರಹ್ಮವೈವರ್ತ 18 000, ಲಿಂಗ 11.000, ವರಾಹ 24,000, ಸ್ಕಂಧ 81,000, ಮತ್ಸ್ಯ 14,000, ಕೂರ್ಮ 17,000 ಮತ್ತು ಗರುಡ 19,000 ಶ್ಲೋಕಗಳು.

ಪುರಾಣಗಳನ್ನು ರಚಿಸಿದವರಾರು ? ಇದರ ಮೂಲವೇನು ? ಇವು ಬೆಳೆದು ಬಂದ ಕ್ರಮ ಹೇಗೆ ? ಇತ್ಯಾದಿ ವಿಷಯಗಳಲ್ಲಿ ಇನ್ನೂ ಭಿನ್ನಾಭಿಪ್ರಾಯಗಳಿವೆ ಒಂದೊಂದು ಪುರಾಣ ಒಂದೊಂದು ಕ್ರಮವನ್ನು ತಿಳಿಸುತ್ತದೆ. ವಿಷ್ಣುಪುರಾಣ ರೀತಿಯಾಗಿ, ಭಗವಾನ್ ವೇದವ್ಯಾಸರು. ವೇದಗಳನ್ನು, ಪರಿಷ್ಕರಿಸಿ, ವಿಂಗಡಿಸಿ ತಮ್ಮ ಶಿಷ್ಯರಿಗೆ ತಿಳಿಸಿದನಂತರ, ಪುರಾಣ ಸಂಹಿತೆಯನ್ನು ರೂಪಿಸಿ, ಅವುಗಳಲ್ಲಿ ಪ್ರಾಚೀನ ತತ್ತ್ವಗಳನ್ನು, ಕಥೆಗಳನ್ನು, ಗೀತಗಳನ್ನು ಸೇರಿಸಿ, ತಮ್ಮ ಪ್ರಧಾನ ಶಿಷ್ಯರಾದ ಸೂತಲೋಮಹರ್ಷಣನಿಗೆ ತಿಳಿಸಿದರು.ಅದು ಅವನಿಂದ ಮುಂದೆ ಪ್ರಚಾರಕ್ಕೆ ಬಂದಿತು. ಅಥರ್ವಣ ವೇದಕಾಲದವರೆಗೆ ಪುರಾಣಗಳು ಕಥಾನಿರೂಪಣರೂಪದಲ್ಲಿಯೇ ಇದ್ದುವು. ವೇದಕಾಲದ ಪುರಾಣಗಳು, ಸೂತವಶವಾಗಿದ್ದುವು. ಕುರುಕ್ಷೇತ್ರಯುದ್ಧವಾದ ನಂತರ ಪುರಾಣಗಳ ರೂಪ ಬದಲಾದುವು. ಉಪನಿಷತ್ತಿನ ಕಾಲಕ್ಕೆ ಇವುಗಳನ್ನು ಲಕ್ಷಣ ಸಾಹಿತ್ಯವನ್ನಾಗಿ ಪರಿವರ್ತಿಸಲಾಯಿತು. ಜೊತೆಗೆ ಸ್ಮೃತಿಕಾಲದ ಮತಾಚರಣೆ ಉತ್ತರಕ್ರಿಯೆ, ಶ್ರದ್ಧೆ, ದಾನ, ವ್ರತ, ದೀಕ್ಷೆ, ಮುಂತಾದ ವಿಷಯಗಳನ್ನು ಸೇರಿಸಲಾಯಿತು. ಕಾಲಕ್ರಮದಲ್ಲಿ ಸಂಗ್ರಹಕಾರರು ಸ್ವಾತಂತ್ರ್ಯವಹಿಸಿ, ಪುರಾಣ ಸಾಹಿತ್ಯವನ್ನಾಗಿ ಪರಿಷ್ಕರಿಸಲು ಸರ್ವ ಸನ್ನಾಹ ಮಾಡಿದರು

ಪುರಾಣಗಳ ಕಥಾವಸ್ತು ಇಷ್ಟೇ ಎಂದು ನಿರ್ಧರಿಸುವಂತಿಲ್ಲ. ಪಂಚಭೂತ ರಚನೆಯಿಂದ ಕೂಡಿದ ವಿಶ್ವಸೃಷ್ಟಿ, ದೇವತೆಗಳ ಮೂಲ, ಋಷಿಗಳ ವಂಶಾನ್ವೇಷಣೆ, ರಾಜ

ಶ್ರೀ ಡಿ. ಕೃಷ್ಣಯ್ಯಂಗಾರ್

ಮಹಾರಾಜರ ವಂಶಾವಳಿ, ಇತ್ಯಾದಿ ಕಥೆಗಳು ಪುರಾಣಗಳಲ್ಲಿವೆ. ವೇದಾಂತ ತತ್ತ್ವ, ವಿಶ್ವವಿವರಣೆ, ಕಾಲ್ಪನಿಕ ಕಥನ – ಇವೂ ಸೇರಿಸಲ್ಪಟ್ಟಿವೆ. ಇವುಗಳ ಜೊತೆಗೆ ದಾನ, ವ್ರತ, ಭಕ್ತಿ, ಯೋಗ, ವಿಷ್ಣು ಮಹೇಶ್ವರರ ಅವತಾರಕಥೆ, – ಇವೆಲ್ಲ ಇವೆ. ಸಂಗೀತ, ವ್ಯಾಕರಣ ವೈದ್ಯ, ನಾಟಕ, ಜ್ಯೋತಿಷ್ಯ, ವಾಸ್ತುಶಿಲ್ಪ, ಖಗೋಳ, ಪ್ರತಿಮಾಶಿಲ್ಪ, ಛಂದಶ್ಶಾಸ್ತ್ರ, ಸಾಹಿತ್ಯ ಮುಂತಾದ ವಿಷಯಗಳೆಲ್ಲ ನಿರೂಪಿತವಾಗಿವೆ. ಹೀಗೆ ಪುರಾಣಗಳ ಬಹುಭಾಗ ವಿಷ್ಣುವಿನ ಅವತಾರ ಕಥೆಗಳಿಂದ ಕೂಡಿವೆ.

ಮತ್ಸ್ಯ, ಕೂರ್ಮ, ವರಾಹ, ವಾಮನ, ನಾರಸಿಂಹ ಅವತಾರಗಳು ಅಮಾನುಷವಾದುವು. ಬಲರಾಮ, ದಶರಥ ರಾಮ, ಕೃಷ್ಣ, ಬುದ್ಧಾವತಾರಗಳು ಇತಿಹಾಸ ಪ್ರಧಾನವಾದುವು. ಪ್ರಾಚೀನ ಸಸ್ಯಜೀವಿಗಳ ರೂಪವಾದ ಮತ್ಸ್ಯವು ಗೋಚರವಾಯಿತು. ಆ ನಂತರ ಕೂರ್ಮ, ವರಾಹಾದಿರೂಪಗಳು ಕಾಣಿಸಿಕೊಂಡವು. ಇವು ಮಧ್ಯಶಿಲಾಯುಗಕ್ಕೆ ಸೇರಿದವು. ನಾರಸಿಂಹ, ವಾಮನ ಗುಹೆಯ ಕಾಲದವರು. ಪರಶುರಾಮ ಅವತಾರ ವಲಸೆ ಹೋಗುವ ಜನರ ಪ್ರತಿನಿಧಿ. ರಾಮಕೃಷ್ಣಾದಿ ಅವತಾರಗಳ ಕಥೆ ನಗರ ಜೀವನದ ಪ್ರತಿನಿಧಿ.

ಜನಜೀವನದ ಮುಖ್ಯ ಧ್ಯೇಯಗಳಾದ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಪುರುಷಾರ್ಥಗಳನ್ನು, ಕೆಲವು ಪುರಾಣಗಳು ವಿವರಿಸುತ್ತವೆ. ಧರ್ಮದ ವಿಷಯವಾಗಿ ಕೆಲವು ಜನಪ್ರಿಯ ಉದಾಹರಣೆಗಳು ನಮೂದಿತವಾಗಿವೆ. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ತಿಳಿಸಲಾಗಿದೆ. ಪಾಪ ನಿವೃತ್ತಿಗಾಗಿ ತಪಸ್ಸು, ದಾನ, ವ್ರತ, ಧ್ಯಾನಾದಿಗಳ ಅನುಷ್ಠಾನ ಸೂಚಿಸಲಾಗಿದೆ. ರಾಜನ ಕರ್ತವ್ಯ, ಆಡಳಿತಕ್ರಮ, ಯುದ್ಧ, ಶಾಂತಿ ರಾಜಧರ್ಮ– ಮುಂತಾದ ವಿಷಯಗಳು ಅರ್ಥಕ್ಕೆ ಸಂಬಂಧಪಟ್ಟವು. ವಿವಾಹ ವಿಧಿ, ಸ್ತ್ರೀಯರ ಪಾತ್ರ, ಪುರುಷರ ಕರ್ತವ್ಯ ಮುಂತಾದ ಕಾಮಕ್ಕೆ ಸಂಬಂಧಪಟ್ಟ ವಿಷಯಗಳು ಕಥಾರೂಪದಲ್ಲಿವೆ. ಸತೀತ್ವದ ವಿಷಯಗಳು, ಸೀತೆ, ಸಾವಿತ್ರಿ ಮುಂತಾದುವು ಕಥಾರೂಪದಲ್ಲಿವೆ. ಪುನರ್ಜನ್ಮದಿಂದ ತಪ್ಪಿಸಿಕೊಳ್ಳಬೇಕಾದರೆ ಮೋಕ್ಷ ಅಗತ್ಯ. ಇದಕ್ಕೆ ಭಕ್ತಿಯೋಗ ಪ್ರಧಾನಮಾರ್ಗ. ಇದನ್ನು ಸಾಧಿಸಬೇಕಾದರೆ ಜ್ಞಾನಯೋಗ ಕರ್ಮಯೋಗ ಎರಡೂ ಅಗತ್ಯ ಎಂದು ಕೆಲವು ಪುರಾಣಗಳು ನಿರೂಪಿಸುತ್ತವೆ. ಇಷ್ಟೇ ಅಲ್ಲದೆ ವೈದ್ಯ, ಪಶುವೈದ್ಯ, ರತ್ನಪರೀಕ್ಷೆ ಇತ್ಯಾದಿವಿಷಯಗಳು ವಿಷ್ಣುಧರ್ಮೋತ್ತರ

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

## ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ.ಸಿ ಒಳಗಿನ ಕಾಟೇಜುಗಳು | " | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. | ,, | ರೂ 50–00 |
| ಎ.ಟಿ.ಸಿ. ನಂ. | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

## ತಿರುಪತಿ

| | | |
|---|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | | ರೂ 20–00 |
| ನಾಲ್ಕು | " | ರೂ 25–00 |
| ಒಂದು | " | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | | ರೂ 50–00 |
| ,, ಒಂದು ಹಾಸಿಗೆಯ ಕೋಣೆ | | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | | |
| ಎರಡು ಹಾಸಿಗೆಗಳ ಕೋಣೆ | | ರೂ 20–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು. ಇಲ್ಲಿನ ದರಗಳು ಬದಲಾಯಿಸಲ್ಪಡಬಹುದು. ತಿರುಮಲೆ ತಿರುಪತಿ ದೇವಸ್ಥಾನಗಳು.

ಪುರಾಣದಲ್ಲಿ ಬರುತ್ತವೆ. ಅಗ್ನಿ ಪುರಾಣದಲ್ಲಿ ಧನುರ್ವಿದ್ಯೆ, ಸಂಗೀತ, ನಾಟಕ ಛಂದಸ್ಸು, ಸಾಹಿತ್ಯ ಮುಂತಾದ ವಿಷಯಗಳ ವಿವರಣೆ ಇದೆ.

ಹೀಗೆ ಪುರಾಣಗಳನ್ನು ಭಾರತೀಯ ಸಂಸ್ಕೃತಿಯ ಮಹಿಮೆಯನ್ನು ತಿಳಿಸುವ ವಿಶ್ವಕೋಶ ಸಾಹಿತ್ಯ ಎಂದು ಹೇಳಬಹುದು. ರಾಜ್ಯಾಂಗ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಕಲೆ, ಶಿಲ್ಪ ಮುಂತಾದ ವಿಷಯ ಸಂಗ್ರಹಕ್ಕೆ ಪುರಾಣಗಳು ಅತ್ಯಮೂಲ್ಯಗಣಿಯಂತಿವೆ. ಪ್ರಸಿದ್ಧ ಮೀಮಾಂಸಕಾರರಾದ ಕುಮಾರಿಲ ಭಟ್ಟರು ತಮ್ಮ ಗ್ರಂಥಗಳಲ್ಲಿ ಪುರಾಣ ಪ್ರಮಾಣಗಳನ್ನು ಉದಹರಿಸಿದ್ದಾರೆ. ಇವರ ಸಮಕಾಲೀನರಾದ ಶಂಕರಾಚಾರ್ಯರು ತಮ್ಮ ಶಾರೀರಕ ಭಾಷ್ಯದಲ್ಲಿ ಪುರಾಣಗಳ ಬಗ್ಗೆ ಹೇಳಿದ್ದಾರೆ.

ವ್ಯಾಸಾದಿ ಮಹರ್ಷಿಗಳು ದೇವಾದಿಗಳೊಡನೆ ಪ್ರತ್ಯಕ್ಷಸಂಬಂಧ ಹೊಂದಿದ್ದರು. ಅವರು ಪರಮಾತ್ಮನ ಸಂದರ್ಶನ ಪಡೆದಿದ್ದರೆಂದೂ ಹೇಳಲಾಗಿದೆ. ಆದರೆ ಇಂದಿನ ತಲೆಮಾರಿನವರು ಇದನ್ನು ನಂಬುವುದಿಲ್ಲ. ಇವರ ದೃಷ್ಟಿಯಲ್ಲಿ ರಾಜಸೂಯ ಯಾಗ ನಡೆದುದೂ ಅಸಂಭವ. ಜಗತ್ತಿನ ಏಕ ಚಕ್ರಾಧಿಪತ್ಯ ಸಾಧಿಸಿದ ದೊರೆ ಕೂಡ ಇದ್ದುದು ಅಸಾಧ್ಯ ಇವರ ದೃಷ್ಟಿಯಲ್ಲಿ.

ಪ್ರಾಚೀನ ಕಾಲದಲ್ಲಿ ಸತ್ಪುರುಷರು ಪರಮಾತ್ಮನ ಪ್ರತ್ಯಕ್ಷ ಸಂಬಂಧ ಹೊಂದಿದ್ದರು ಎಂದು ಪತಂಜಲಿ ಯೋಗಸೂತ್ರವು ತಿಳಿಸುತ್ತದೆ. ಮಾನವ ಶರೀರದ ಆತ್ಮಶಕ್ತಿಯನ್ನು ಬಹು ಸೂಕ್ಷ್ಮರೂಪಕ್ಕೆ ಪರಿವರ್ತಿಸಬಹುದೆಂಬುದಕ್ಕೆ ಯೋಗಶಾಸ್ತ್ರದ ಆಧಾರಗಳಿವೆ. ಶ್ರುತಿಗಳು ಇದನ್ನು ಸಮರ್ಥಿಸಿವೆ. ಮಾನವನು ಯೋಗಸಿದ್ಧಿಯ ಮೂಲಕ ಪಂಚಭೂತಗಳನ್ನು ಜಯಿಸಿ ಜರಾಮರಣವನ್ನು ತಪ್ಪಿಸಿಕೊಂಡು, ಶಾಶ್ವತ ಸುಖ ಪಡೆಯಬಹುದೆಂಬುದನ್ನು ಕೆಲವು ಪುರಾಣಗಳು ಉದಾಹರಣೆಯ ಮೂಲಕ ನಿರೂಪಿಸಿವೆ. ಪತಂಜಲಿ ಮಹಾಚಾರ್ಯರು ತಮ್ಮ ದರ್ಶನ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಪುರಾಣ ಪ್ರಮಾಣಗಳನ್ನು ಉದಹರಿಸಿದ್ದಾರೆ. ಧರ್ಮಶಾಸ್ತ್ರ, ಮತ್ತು ಸ್ಮೃತಿ ವಚನ ಸಮರ್ಥನೆಗೆ ಪುರಾಣವಚನಗಳನ್ನು ಅರಿಸಿಕೊಳ್ಳಲಾಗಿದೆ. ಯಾಜ್ಞವಲ್ಕ್ಯರು ತಮ್ಮ ಶಾಸನ ನಿಯಮ ಪ್ರತಿಪಾದನೆಗೆ ಪುರಾಣ ಪ್ರಮಾಣಗಳನ್ನು ಉದಹರಿಸಿದ್ದಾರೆ. ಬಹುಕಾಲದಿಂದ ಪುರಾಣಗಳ ಪರಿಶೀಲನೆ ನಡೆಯುತ್ತ ಬರುತ್ತಿದೆ. ಪಾಶ್ಚಾತ್ಯ ಪಂಡಿತರೂ ಕೂಡ ಇಂತಹ ಪರಿಶೀಲನೆಯಲ್ಲಿ ಪಾತ್ರವಹಿಸುತ್ತಿದ್ದಾರೆ. ಸ್ಮಿತ್, ಜೇಲುಸ್‌ವಾಲ, ಭಂಡಾರ್ಕರ್, ರಾಯ್‌ಚೌಧುರಿ, ಪ್ರಧಾನ್, ರಂಗಾಚಾರಿ, ಮುಂತಾದ ಚರಿತ್ರೆಕಾರರು ತಮ್ಮ ಕೃತಿ ರಚನೆಗಾಗಿ ಪುರಾಣ ವಿಷಯಗಳನ್ನು ಸಂಗ್ರಹಿಸಿದ್ದಾರೆ. ಇಂತಹ ಪರಿಶೀಲನೆಯ ಫಲವಾಗಿ ಭಾರತೀಯ ಸಂಸ್ಕೃತಿ ವಿಷಯವಾಗಿ ಸರ್ವೋತ್ತಮ ಲೇಖನಗಳು ಪ್ರಕಟವಾಗಿವೆ. ಇದರಿಂದ ಪುರಾಣ ಸಾಹಿತ್ಯ ಮತ್ತು ರಾಷ್ಟ್ರೀಯ ಮನಶ್ಶಾಸ್ತ್ರ ಅಭಿವೃದ್ಧಿ ಹೊಂದಿವೆ.

ಭಾರತೀಯ ಜನಜೀವನ, ದರ್ಶನ ಮತ್ತು ಆಲೋಚನೆಯ ಸತ್ಯವನ್ನು ಮಾನವನ ಮನಸ್ಸಿನಲ್ಲಿ ಪ್ರತಿಬಿಂಬಿಸುವುದೇ ಪುರಾಣ ಸಾಹಿತ್ಯದ ಮುಖ್ಯ ಉದ್ದೇಶ. ಮಾನವ ಹಿತ ದೃಷ್ಟಿಯಿಂದ ಇವನ್ನು ವ್ಯಾಸಂಗ ಮಾಡಬೇಕು. ಭಾರತೀಯರ ಅಸಾಧಾರಣ ಪ್ರತಿಭೆ ಘನತೆ, ಮಹತ್ವ ಮತ್ತು ದೌರ್ಬಲ್ಯ-ಇವನ್ನು ಕೂಡ ಕೆಲವು ಪುರಾಣಗಳು ಪ್ರತಿಬಿಂಬಿಸುತ್ತವೆ. ಉತ್ತಮ ಜೀವನ ನಡೆಸುವುದಕ್ಕೆ ಪುರಾಣಗಳು ಸಹಾಯಮಾಡುತ್ತವೆ.

ಒಟ್ಟಿನಲ್ಲಿ ಪುರಾಣಗಳು ಸಂಸ್ಕೃತ ಸಾಹಿತ್ಯದ ಒಂದು ಮುಖ್ಯಭಾಗ. ಮೊದಲು ಗುರುಪರಂಪರೆಯ ವಶದಲ್ಲಿದ್ದು, ಪುರಾಣಗಳು ಕಾಲಕ್ರಮೇಣ, ಜೀವನದೃಷ್ಟಿಕೋನ ವಿಶಾಲವಾದಂತೆಲ್ಲ ಅಭಿವೃದ್ಧಿ ಹೊಂದಿದುವು. ವೈಷ್ಣವ, ಶೈವ, ಶಾಕ್ತೇಯ ಕಥೆಗಳು ಸೇರಿಸಲ್ಪಟ್ಟವು. ಒಂದು ರೀತಿಯಲ್ಲಿ ಪುರಾಣ ಸಾಹಿತ್ಯವನ್ನು ಕಾಲ್ಪನಿಕ ಐತಿಹಾಸಿಕ ಕಥೆ, ಪದ್ಧತಿ, ಉಪದೇಶ ಮತ್ತು ನಡತೆ ಇವುಗಳೆಲ್ಲದರ ಮಿಶ್ರಣ ಎಂದು ಹೇಳಬಹುದು. ಇವುಗಳಲ್ಲಿ ಮಂತ್ರ, ತಂತ್ರ, ಇಂದ್ರಜಾಲ, ಮಂತ್ರೋಪದೇಶ–ಎಲ್ಲವೂ ಸೇರಿಕೊಂಡಿವೆ. ಹೀಗೆ ಪುರಾಣಗಳು ವಸ್ತು ವೈವಿಧ್ಯತೆಯಲ್ಲಿ, ಭಾಷಾ ಮರ್ಯಾದೆಯಲ್ಲಿ, ಮನೋಹರ ಕಾವ್ಯ ಪದ್ಧತಿಯಲ್ಲಿ ತ್ರಿವೇಣೀ ಸಂಗಮದಂತೆ ಪವಿತ್ರವೂ, ಬೋಧಪ್ರದವೂ ಆಗಿ ಮತ್ತು ಆಕರ್ಷಯುತವೂ ಆಗಿ ಸರ್ವರ ಆದರಕ್ಕೆ ಯೋಗ್ಯವಾಗಿವೆ. ನಾಡಿನ ಜನತೆಗೆ ದಾರಿದೀಪವಾಗಿ ಮಾರ್ಗದರ್ಶಕವಾಗಿವೆ. ಆದುದರಿಂದ ಪುರಾಣ ಸಾಹಿತ್ಯದ ಪರಿಶೀಲನೆ, ಅನುಶೀಲನೆ ಅಗತ್ಯವಾಗಿ ನಡೆಯಬೇಕು.

★

## ತಿರುಮಲೆ ತಿರುಪತಿ ದೇವಸ್ಥಾನಗಳು.

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ. ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 10 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು ತಿ. ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಣ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ.
* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು.
* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯು ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಅರತಿಯನ್ನು ಒದಗಿಸಲಾಗುವುದು.
* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.
* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.
* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಕಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತಾ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತಾ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್, ಬೊಂಬಾಯಿ) | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂ.ಪ್ರ.**

**ಕಾರ್ಯನಿರ್ವಹಣಾಧಿಕಾರಿ**

# ಸಿಂಹಾಸನದಿಂದ ದರ್ಭಾಸನಕ್ಕೆ

ದೇವಗುರು ಬೃಹಸ್ಪತ್ಯಾಚಾರ್ಯರು ಮಮತೆಯೊಂದಿಗೆ ಕೂಡಿದ್ದರ ಪರಿಣಾಮವಾಗಿ ಜನಿಸಿದ ಮಗುವೇ ಭರದ್ವಾಜ. ಕೂಸು ಹುಟ್ಟಿದ ಬಳಿಕ ಅದನ್ನಾರು ರಕ್ಷಿಸಬೇಕು? ಮಮತೆಯು ಅದನ್ನು ಬೃಹಸ್ಪತಿಗೇ ಒಪ್ಪಿಸಿ 'ಇದನ್ನು ನೀವೇ ಪೋಷಿಸಿರಿ' ಎಂದಳು. ಅವನು ಅವಳಿಗೆ 'ನೀನೇ ತಾಯಿಯಾದುದರಿಂದ ಇದನ್ನು ರಕ್ಷಿಸು' ಎಂದು ಹೇಳಿದ. ಅವಳು ಆ ಮಗುವನ್ನು ಬಿಟ್ಟೇ ನಡೆದಳು. ಬೃಹಸ್ಪತಿಯೂ ಅದನ್ನು ತೊರೆದು ನಡೆದನು. ಆಗ ಮರುತ್ತರು ಆ ಮಗುವನ್ನು ಎತ್ತಿಕೊಂಡು ಭೂಮಂಡಲದ ಚಕ್ರವರ್ತಿ ಭರತನಿಗೆ ತಂದೊಪ್ಪಿಸಿದರು. ಭರತನಿಗೆ ಸಂತಾನ ಇರಲಿಲ್ಲ.

ದುಷ್ಯಂತ ಸಾರ್ವಭೌಮ ಮತ್ತು ಶಕುಂತಲೆಯರ ಮಗನಾದ ಭರತಚಕ್ರವರ್ತಿಗೆ ಮೂವರು ಹೆಂಡತಿಯರಿದ್ದರು. ಮೂವರು ಹೆಂಡತಿಯರಲ್ಲಿಯೂ ಭರತನಿಗೆ ಒಬ್ಬೊಬ್ಬ ಮಕ್ಕಳಿದ್ದರು. ಯಾರೂ ದುಷ್ಯಂತನಷ್ಟು ತೇಜಸ್ಸಂಪನ್ನರಲ್ಲ. ಕಳಾವಿಹೀನರಾದ ಮಕ್ಕಳ ದೆಸೆಯಿಂದ ತಮ್ಮನ್ನೇ ಮಹಾರಾಜ ತೊರೆದು ಬಿಡಬಹುದು ಎಂಬ ಭಯ ಮೂವರೂ ರಾಣಿಯರಿಗೆ ಆವರಿಸಿ, ಅವರು ರಾಜನಿಗೆ ತಿಳಿಯದಂತೆ ತಮ್ಮ ತಮ್ಮ ಮಕ್ಕಳನ್ನು ಸಂಹರಿಸಿದರು. ಇದು ರಾಜನಿಗೆ ತಿಳಿದಾಗ ಆತ ಬಹಳ ವ್ಯಥಿತನಾದ. ತನ್ನ ವಂಶದ ಕುಡಿಯೇ ಬಾಡಿಹೋಯಿತೆಂದು ತೀವ್ರ ದುಃಖದಿಂದ ಸಂತಾನಕ್ಕಾಗಿ 'ಮರುತ್ ಸ್ತೋಮ' ಎಂಬ ಯಜ್ಞ ಮಾಡಿದ. ಆಗ ದೇವತೆಗಳು ತಾಯಿ ತಂದೆಗಳು ತೊರೆದು ಹೋದ ಅನಾಥ ಭರದ್ವಾಜನನ್ನು ತಂದು ಅವನಿಗಿತ್ತು "ಇವನನ್ನೇ ನಿನ್ನ ಮಗನನ್ನಾಗಿ ಮಾಡಿಕೋ" ಎಂದು ಹೇಳಿದನು. ಅದರಂತೆ ಭರತನು ಭರದ್ವಾಜನನ್ನು ತನ್ನ ಪುತ್ರನೆಂದು ಸ್ವೀಕರಿಸಿದನು.

ಆದರೆ ಜನ್ಮತಃ ವಿರಕ್ತನಾದ ಭರದ್ವಾಜನಿಗೆ ರಾಜ್ಯ, ಅಧಿಕಾರ, ಐಶ್ವರ್ಯ ಮತ್ತು ವಿಷಯ ಸುಖಗಳ ಭೋಗೇಚ್ಛೆಯು ಇರಲಿಲ್ಲ. ಆದುದರಿಂದ ಅವನು ಭರತ ಚಕ್ರವರ್ತಿಯ ಕಡೆಯಿಂದ ಯಮುನಾನದಿಯ ದಂಡೆಯ ಮೇಲೆ ಅನೇಕ ಯಜ್ಞಯಾಗಗಳನ್ನು ಮಾಡಿಸಿ. ಅವನಿಗೆ ಬೇರೊಂದು ಗಂಡುಮಗು ಜನಿಸುವಂತೆ ಮಾಡಿದನು. ಭರತ ಚಕ್ರವರ್ತಿಯು ತೀರಿಕೊಂಡ ಬಳಿಕ ಅವನ ಔರಸಪುತ್ರನಾದ ಭೂಮನ್ಯುವು ಪ್ರಾಪ್ತಪ್ರಬುದ್ಧನಾದ ಕೂಡಲೇ ಅವನಿಗೆ ಆ ಭರತರಾಜ್ಯವನ್ನೆಲ್ಲ ಒಪ್ಪಿಸಿ ತಾನು ತಪಸ್ಸಿಗೆ ನಡೆದ ಭರದ್ವಾಜ

ಆವರೆ ಲೋಕೋತ್ತರ ಪ್ರತಿಭಾಶಾಲಿಯೂ, ರಾಜಕಾರಣಪಂಡಿತನೂ ಆದ ಭರದ್ವಾಜನನ್ನು ಅಂದಿನ ಜನ ಏಕಾಂತದಲ್ಲಿ ತಪಸ್ಸನ್ನು ಮಾಡಗೊಡುತ್ತಿರಲಿಲ್ಲ. ಕಾಶಿಯ ನರೇಶ ದಿವೋದಾಸನಿಗೆ ಶಂಬರಾಸುರನ ಉಪದ್ರವವು ಬಹಳವಾಗಿ ಅವನು ಕಂಗಾಲಾಗಿದ್ದ. ಆದ ಅವನು ಭರದ್ವಾಜನ ಬಳಿಗೆ ಬಂದು ತನ್ನ ಕುಲಗುರುವಾಗಿ ಕಾಪಾಡಬೇಕೆಂದು ಅಂಗಲಾಚಿದ. ಆಗ ಪ್ರಜಾವತ್ಸಲನಾದ ಭರದ್ವಾಜ ಕಾಶೀಖಂಡದ ಜನರ ಪೀಡೆಯನ್ನು ಪರಿಹರಿಸಲಿಕ್ಕಾಗಿ ದಿವೋದಾಸನ ಪಕ್ಷಗಟ್ಟಿನಿಂತು ಸಾಕ್ಷಾತ್ ದೇವೇಂದ್ರನೇ ಅವನ ಸಹಾಯಕ್ಕೆ ಬರುವಂತೆ ಮಾಡಿದ- ಇದರಿಂದ ಶಂಬರಾಸುರನು ಸೋತು ಓಡಿಹೋದ. ವಿಜಯಿಯಾದ ದಿವೋದಾಸನಿಗೆ ಅಸುರರಾಜ್ಯದ ಅಪಾರ ಐಶ್ವರ್ಯವು ಕೈವಶವಾಯಿತು. ಆಗ ಅವನು ಭರದ್ವಾಜರಿಗೂ ವಿಪುಲ ಸಂಪತ್ತನ್ನು ದಾನಮಾಡಿದನು.

ಇದರಂತೆ ಆ ಕಾಲದಲ್ಲಿ ವರಶಿಖ ಎಂಬ ರಾಜರು ಮಹಾಪ್ರಬಲರೂ ಮದೋನ್ಮತ್ತರೂ ಆಗಿದ್ದರು. ಅವರು ತಮ್ಮ ಪ್ರಚಂಡ ಸೇನೆಯಿಂದ ಒಡಗೂಡಿ ಕಂಡವರ ರಾಜ್ಯದಲ್ಲಿ ನುಗ್ಗಿ ಅಲ್ಲಿಯ ಅರಸರನ್ನು ಸೋಲಿಸಿ ಸಿರಿಸಂಪತ್ತನ್ನೆಲ್ಲ ಕೊಳ್ಳೆ ಹೊಡೆಯುತ್ತಿದ್ದರು.

ಅಭ್ಯಾವರ್ತಿ, ಚಾಯಮಾನ, ಪ್ರಸ್ತೋಕ ಮುಂತಾದ ಅನೇಕ ರಾಜರು ವಾರಶಿಖರ ಪ್ರಚಂಡ ದಾಳಿಗೆ ತುತ್ತಾಗಿ ರಾಜ್ಯಭ್ರಷ್ಟರಾಗಿ ದಿಕ್ಕುಗೇಡಿಗಳಾಗಿದ್ದರು. ಅವರೆಲ್ಲರೂ ಭರದ್ವಾಜರ ಕರ್ತೃತ್ವ ಶಕ್ತಿಯನ್ನು ಕೇಳಿ ಅವರಿಗೆ ಶರಣಾಗತರಾಗಿ ರಕ್ಷಿಸಬೇಕೆಂದು ಬೇಡಿಕೊಂಡರು. ಆಗ ಭರದ್ವಾಜರು ತಮ್ಮ ಚಿರಂಜೀವನಾದ ಪಾಯುಮುನಿಯನ್ನು ಕರೆಯಿಸಿ 'ಇವರು ಯುದ್ಧದಲ್ಲಿ ಅಜೇಯರಾಗುವಂತೆ ಮಾಡು' ಎಂದು ಹೇಳಿದರು.

ಆಗ ಪಾಯುವು ತನ್ನ ಅದ್ಭುತವಾದ ಮಂತ್ರಶಕ್ತಿಯಿಂದ ದಿವ್ಯವಾದ ರಥ, ಬಿಲ್ಲು, ಬಾಣ, ಮತ್ತು ಅನೇಕ ಶಸ್ತ್ರಾಸ್ತ್ರಗಳನ್ನು ನಿರ್ಮಿಸಿ ಅವುಗಳನ್ನು ಅಭಿಮಂತ್ರಣ ಮಾಡಿ ಆ ಎಲ್ಲ ರಾಜರಿಗೂ ಕೊಟ್ಟನು. ಇಂಥ ದಿವ್ಯಾಸ್ತ್ರಗಳನ್ನು ಪಡೆದ ಅಭ್ಯಾವರ್ತಿ, ಚಾಯಮಾನ ಮತ್ತು ಸೃಂಜಯ, ಕುಮಾರ, ಪ್ರಸ್ತೋಕ ಮುಂತಾದ ಪೀಡಿತ ರಾಜರು ಹರಿಯೂಪೀಯಾ ನದಿಯ ದಂಡೆಯ ಮೇಲೆ ವಾರಶಿಖರನ್ನು ತಡೆದರು. ಅವರಿಬ್ಬರ ಈ ಕಾಳಗದಲ್ಲಿ ಭರದ್ವಾಜರ ಪ್ರಯತ್ನದಿಂದ ಇಂದ್ರನ ಸಹಾಯವು ಚಾಯಮಾನಾದಿಗಳಿಗೆ ದೊರೆತು; ಅವರು ಹುಮ್ಮಸ್ಸಿನಿಂದ ವಾರಶಿಖರನ್ನೆಲ್ಲ ಕೊಚ್ಚಿ ಹಾಕಿದರು. ಶತ್ರುಗಳು ಅಂಜಿ ಓಡತೊಡಗಿದರು. ಆಗ ಅಭ್ಯಾವರ್ತಿ ಚಾಯಮಾನರ ಸೈನ್ಯಗಳು ಅವರನ್ನು ಯಾವ್ಯಾವತೀನದಿಯ ಪಾತ್ರದವರೆಗೂ ಬೆನ್ನಟ್ಟಿದವು. ಹೀಗೆ ಭರದ್ವಾಜರ ಅನುಗ್ರಹದಿಂದ ಗೆಲುವು ಪಡೆದ ಆ ರಾಜರು ತಮ್ಮ ಗುರುಗಳಿಗೆ ಅಪರಿಮಿತ ಐಶ್ವರ್ಯವನ್ನು ಇತ್ತರು. ಭರದ್ವಾಜರಿಗೆ ಯಶಸ್ವಿನ್ ಪಾಯು, ಗರ್ಗ, ಮುಂತಾದ ಅನೇಕ ಬ್ರಹ್ಮಜ್ಞಾನಿಗಳಾದ ಮಕ್ಕಳು ಇದ್ದರು. ವೇದ

ಶ್ರೀ ಪಂಡರೀನಾಥಾಚಾರ್ಯ
ಗಲಗಲಿ

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**

ಕಾಲದಲ್ಲಿ, ರಾಜಕಾರಣದಲ್ಲಿ ಅತ್ಯಂತ ನಿಷ್ಣಾತ ಋಷಿಯೆಂದರೆ ಭರದ್ವಾಜರೇ ಆಗಿದ್ದರು. ಮುಂದೆ ಕಾರ್ತವೀರ್ಯಾರ್ಜುನನು ಬಂದು ದಿವೋದಾಸನನ್ನು ಸೋಲಿಸಿ ಕಾಶಿಯನ್ನು ಆಕ್ರಮಿಸಿದಾಗ ದಿವೋದಾಸನು ಓಡಿ ಭರದ್ವಾಜರಿದ್ದ ಆಶ್ರಮಕ್ಕೆ ಬಂದು ಮತ್ತೆ ಅವರಿಗೆ 'ಶರಣು' ಎಂದ. ಆಗ ಭರದ್ವಾಜರು ದಿವೋದಾಸನಿಂದ ಯಜ್ಞ ಮಾಡಿಸಿ ಅವನಿಗೆ 'ಪ್ರತರ್ದನ' ಎಂಬ ಶೂರ ಮಗನನ್ನು ಕರುಣಿಸಿ ಅವನಿಂದ ಕಾರ್ತ–ವೀರ್ಯನ ಮಕ್ಕಳನ್ನು ಸೋಲಿಸಿ ಅವನ ರಾಜ್ಯವನ್ನು ಮರಳಿ ಕೊಡಿಸಿದರು.

ಇಷ್ಟೆಲ್ಲ ಮಾನ, ಧನ, ಪ್ರತಿಷ್ಠೆ, ಗೌರವಗಳು ತಾವಾಗಿ ಬಂದು ಅಡಿಬುಡದಲ್ಲಿ ಬಿದ್ದು ಹೊರಳಾಡುತ್ತಿದ್ದರೂ ಭರದ್ವಾಜರಿಗೆ ಐಶ್ವರ್ಯ ಕೀರ್ತಿಗಳ ವ್ಯಾಮೋಹ ಇನಿತೂ ಇರಲಿಲ್ಲ.

ಅವರಿಗಿದ್ದ ಒಂದೇ ಒಂದು ಆಶೆಯೆಂದರೆ 'ಸಮಗ್ರವಾದ ವೇದರಾಶಿಯನ್ನೆಲ್ಲ ಒಮ್ಮೆ ಓದಿಬಿಡಬೇಕು' ಎಂಬುದೇ ಆಗಿದ್ದಿತು. ಅವರು ತಮ್ಮ ಇಡೀ ಜೀವಮಾನದಲ್ಲಿ ಉಳಿದೆಲ್ಲ ಕಾರ್ಯಕ್ರಮಗಳಿಗೆ ಅತ್ಯಲ್ಪ ಅವಕಾಶವನ್ನಿತ್ತು ಸಮಯವನ್ನೆಲ್ಲ ವೇದಾಧ್ಯಯನಕ್ಕೇ ವಿನಿಯೋಗಿಸಿದರು.

ವಯಸ್ಸಾದ ಬಳಿಕಂತೂ ಭರದ್ವಾಜರು ಎಲ್ಲ ಲೋಕ, ವ್ಯವಹಾರ, ಮನೆ, ಮಾರುಗಳನ್ನು ತೊರೆದು ಏಕಾಂತದಲ್ಲಿ ನಿಂತು ವೇದಗಳನ್ನು ಸಂಶೋಧಿಸತೊಡಗಿದರು. ವೇದರಾಶಿಯನ್ನು ಅಧ್ಯಯನ ಮಾಡುತ್ತ ಮಾಡುತ್ತ ಆ ಜ್ಞಾನಸಾಗರದ ಅಗಾಧತೆಯ ಅರಿವು ಅವರಿಗೆ ಆಗತೊಡಗಿತ್ತು. ಆದರೂ ಸಮಗ್ರ ವೇದ ವಾಙ್ಮಯವನ್ನು ಅಧ್ಯಯನಿಸಿಯೇ ಬಿಡಬೇಕೆಂಬ ಮೊದಲಿನ ಹಂಬಲ ಈಗ ತೀವ್ರ ಆಗ್ರಹವಾಗಿ ರೂಪುಗೊಂಡಿತು.

ಕಾಲದ ಪರಿವೆಯೇ ಇಲ್ಲದೇ ಅಹೋರಾತ್ರಿ ಅಖಂಡವಾಗಿ ಅವರ ಅಧ್ಯಯನ–ಸಂಶೋಧನೆ ಸಾಗಿತು. ಸುಮಾರು ಮುನ್ನೂರು ವರ್ಷಗಳ ಕಾಲ ಅವರು ಒಂದೇ ಸ್ಥಳದಲ್ಲಿದ್ದು ಚತುರ್ವೇದಗಳ ವಿವಿಧ ಶಾಖೆಗಳನ್ನು ಪರೀಕ್ಷಿಸಿ, ಪಾರಾಯಣಿಸಿ ಅವುಗಳ ಅರ್ಥಾನುಸಂಧಾನ ಮಾಡಿಕೊಂಡು, ಆ ಜ್ಞಾನವನ್ನು ತಮ್ಮದಾಗಿಸಿಕೊಂಡರು.

ಮುಪ್ಪು ಅವರ ಪಾಂಚಭೌತಿಕವಾದ ದೇಹವನ್ನು ಅಪ್ಪಿ ಜೀರ್ಣ ಶೀರ್ಣವಾಗಿಸಿತ್ತು. ಸಾವು ಬಾವ್ರಗ ಬೆಕ್ಕಿನಂತೆ ಹತ್ತಿರದಲ್ಲೇ ಹೊಂಚಿತ್ತು. ಆಗ ಮರಣ ಶಯ್ಯೆಯಲ್ಲಿದ್ದ ಅವರನ್ನು ಮಾತನಾಡಿಸಬೇಕೆಂದು ಎಲ್ಲ ಋಷಿಮುನಿಗಳೂ ದೇವಗಂಧರ್ವರೂ ಬಂದು ಹೋದರು. ದೇವರಾಜನಾದ ಇಂದ್ರನೂ ಒಮ್ಮೆ ಅವರ ಮುರುಕು ಗುಡಿಸಲಿಗೆ ಬಂದನು. ಅವನನ್ನು ಕಂಡು ದರ್ಭಶಯ್ಯೆಯಲ್ಲಿ ಒರಗಿ ಕೊನೆಯ ದಿನಗಳನ್ನು ಎಣಿಸುತ್ತಲಿರುವ ಭರದ್ವಾಜರ ಒಣ ತುಟಿಯಲ್ಲಿ ಕ್ಷೀಣ ನಗೆಯೊಂದು ಕಾಣಿಸಿತು. ಆಗ ಇಂದ್ರನು ಅವರಿಗೆ ಕಿವಿಯ ಬಳಿ ಬಾಗಿ 'ತಮ್ಮ ಕೊನೆಯ ಅಪೇಕ್ಷೆ ಏನು' ಎಂದು ಕೇಳಿದ. ಆಗ ಋಷಿಯು ಮತ್ತೆ ೩೦೦ ವರ್ಷ ಆಯುಷ್ಯ ಬೇಕೆಂದು ಕೇಳಿದ. ಆಗ ಅದಕ್ಕೆ ಇಂದ್ರನು 'ಆಗಲಿ' ಎಂದು ಅವರಿಗೆ ಮುನ್ನೂರು ವರ್ಷದ ಆಯುಷ್ಯವನ್ನು ಕರುಣಿಸಿದ. ಕೂಡಲೇ ಅವರು ನವತರುಣನಂತೆ ಎದ್ದು ಕುಳಿತರು. ಈಗ ಭರದ್ವಾಜರು ತಮ್ಮ ಹೊಸ ಜೀವನದಲ್ಲಿ ಒಂದು ಕ್ಷಣವೂ ವ್ಯರ್ಥಗೈಯದೇ ಹಗಲಿರುಳು ವೇದ ಸಾಹಿತ್ಯವನ್ನು ಓದತೊಡಗಿದರು. ಓದಿ ಓದಿದಂತೆ ಆ ಅಕ್ಷರವಾಙ್ಮಯ ಪ್ರಪಂಚದ ಜ್ಞಾನದ ಕ್ಷಿತಿಜವು ವಿಸ್ತರಿಸುತ್ತ ಹೋಗುತ್ತಿತ್ತು. ನವಜನ್ಮದ ಮುನ್ನೂರು ವರ್ಷಗಳು ಈ ವೇದಾಧ್ಯಯನದಲ್ಲಿ ಎತ್ತೋ ಹಾರಿಹೋದವು. ಮತ್ತೆ ಮುಪ್ಪು ಮರಣಗಳು ಸಮೀಪಿಸಿದವು. ಸಂಪೂರ್ಣ ವೇದವನ್ನು ಓದಿಯೇ ಬಿಡಬೇಕೆಂಬ ಛಲಹಿಡಿದ ಭರದ್ವಾಜರು ಮತ್ತೆ ಮುನ್ನೂರು ವರ್ಷ ಆಯುಷ್ಯನ ಮತ್ತೊಂದು ಜನ್ಮ ಕೂಡ ಬೇಕೆಂದು ಕೇಳಿಕೊಂಡರು. ಹೀಗೆ ಮೂರು ಬಾರಿ ಮೂರು ಜನ್ಮ ತಾಳಿ ಒಟ್ಟಿಗೆ ಸಾವಿ–ರಾರು ವರ್ಷ ಅಧ್ಯಯನಮಾಡಿದರೂ ಅವರಿಗೆ ಆ ವಿದ್ಯಾಸಾಗರದ ಅಂತಪಾರಗಳು ಹತ್ತಲಿಲ್ಲ. ಆದರೂ ಸಂಪೂರ್ಣ ಜ್ಞಾನ ರಾಶಿಯನ್ನು ತಮ್ಮದಾಗಿಸಿಕೊಳ್ಳಬೇಕೆಂಬ ಅಪೇಕ್ಷೆ ಕುಂದಲಿಲ್ಲ. ಹಾಗೆಯೇ ಮುಂದುವರೆದಿತ್ತು.

ಒಂದು ದಿನ ದೇವೇಂದ್ರನು ಅವರ ಹತ್ತಿರ ಬಂದು ಅವರನ್ನು ದೊಡ್ಡದಾದ ಮೂರು ಗುಡ್ಡಗಳ ಬಳಿಗೆ ಕರೆದೊಯ್ದು ನಿಲ್ಲಿಸಿ ಅಲ್ಲಿ ಒಂದು ಬೆಟ್ಟದ ಬುಡದಲ್ಲಿಯ ಹಿಡಿ ಮಣ್ಣನ್ನು ಕೈಯಲ್ಲಿ ತೆಗೆದುಕೊಂಡು "ಬ್ರಹ್ಮನ್, ನೀವು ಈ ಮೂರು ಜನ್ಮಗಳಲ್ಲಿ ಓದಿದ ವೇದಭಾಗವು ಈ ನನ್ನ ಮುಷ್ಟಿಮಲ್ಲಿಯ ಮಣ್ಣಿನಷ್ಟಿದೆ. ಇನ್ನು ನೀವು ತಿಳಿಯಲಾರದ ಓದಲಾರದ ಭಾಗವು ಈ ಮೂರು ಗುಡ್ಡಗಳಷ್ಟಿದೆ'' ಎಂದು ಋಗ್ವೇದ, ಯಜುರ್ವೇದ, ಸಾಮವೇದಗಳ ರಾಶಿಯನ್ನು ತೋರಿಸಿದ. ಆಗ ಭರದ್ವಾಜರಿಗೆ "ವೇದಗಳು ಅನಂತ ಅಪಾರವಿದ್ದು ಅವುಗಳನ್ನು ಪೂರ್ತಿಯಾಗಿ ಓದಲು ತಾವು ಎಷ್ಟು ಜನ್ಮ ಶ್ರಮಿಸಿದರೂ ಶಕ್ಯವಿಲ್ಲ" ಎಂದು ಖಾತ್ರಿಯಾಯಿತು. ಸಂಪೂರ್ಣವೇದದ ಅಂತಪಾರಗಳನ್ನು ಕಂಡೇಬಿಡುತ್ತೇನೆ ಎಂಬ ಅವರ ಛಲವು ಕಡಿಮೆಯಾಯಿತು.

ಆಗ ದೀನ ದೃಷ್ಟಿಯಿಂದ ಆ ವೇದ ರಾಶಿಯ ಕಡೆಗೆ ನೋಡಿ ನಿರಾಶರಾಗಿ ನಿಟ್ಟುಸಿರು ಬಿಡುತ್ತ ಕುಳಿತ ಆ ಮಹಾಮುನಿಗಳನ್ನು ಕುರಿತು ಮಹೇಂದ್ರನು "ಸ್ವಾಮಿ ನಿಮಗೆ ಸಂಪೂರ್ಣ ವೇದಾಧ್ಯಯನದ ಫಲ ದೊರೆಯಬೇಕೆಂದು ಅಪೇಕ್ಷೆ ಇದ್ದರೆ 'ಸಾವಿತ್ರ್ಯಗ್ನಿ ಚಯನ'ವನ್ನು ಮಾಡಿರಿ. ಅದರಿಂದ ಸಮಗ್ರ ವೇದವನ್ನು ಓದಿ ತಿಳಿದುಕೊಂಡ ಫಲಕ್ಕೆ ಸಮನಾದ ಫಲ ದೊರಕುತ್ತದೆ'' ಎಂದು ಉಪದೇಶಿಸಿದ. ಅದರಿಂದ ಮುನಿಗಳಿಗೆ ಸಮಾಧಾನವಾಗಿ ಅವರು ಉತ್ಸಾಹದಿಂದ ಸಾವಿತ್ರ್ಯಗ್ನಿ ಚಯನವನ್ನು ಮಾಡಿ ಫಲ ಪಡೆದು ಸ್ವರ್ಗಕ್ಕೆ ಪಯಣಿಸಿದರು.

ಈ ಸಾವಿತ್ರ್ಯ ವಿದ್ಯೆಯನ್ನು ಹಿಂದೆ ಅಹೋರಾತ್ರಿಗಳ ಅಭಿಮಾನಿದೇವತೆಗಳು ಬಂದು ರಾಜರ್ಷಿ ಜನಕ ಮಹಾರಾಜನಿಗೆ ಉಪದೇಶ ಮಾಡಿದ್ದರು.

ಈ ವಂಶದಲ್ಲಿ ಭರದ್ವಾಜರು ಮಾತ್ರವಲ್ಲದೇ ಅವರ ಸಂತತಿಯ ಅನೇಕ ಋಷಿ

ಗಳು ವೇದದ್ರಷ್ಟಾರರಾದರು. ರಾಮನು ವನವಾಸಕ್ಕೆ ಹೋಗುವಾಗ ಅವರ ಆಶ್ರಮದಲ್ಲಿ ತಂಗಿದ್ದ, ಮುಂದೆ ಅಣ್ಣನನ್ನು ಕಾಣಲು ಬಂದ ಭರತನ ರಾಜಪರಿವಾರಕ್ಕೆಲ್ಲ ಭರದ್ವಾಜರು ರಾಜಾತಿಥ್ಯವನ್ನು ನೀಡಿದರು. ಪಂಚರಾತ್ರ ಸಂಪ್ರದಾಯದಲ್ಲಿ 'ಭರದ್ವಾಜ ಸಂಹಿತಾ' ಎಂಬ ನಾಕು ಅಧ್ಯಾಯದ ಗ್ರಂಥವಿದೆ. ಪದ್ಮಪುರಾಣದಲ್ಲಿ ಭರದ್ವಾಜ ಸ್ಮೃತಿಯ ಉಲ್ಲೇಖವಿದೆ, ಮಹಾಭಾರತ ಹಾಗೂ ಕೌಟಿಲೀಯ ಅರ್ಥಶಾಸ್ತ್ರಗಳಲ್ಲಿ ಭರದ್ವಾಜರ ದಂಡನೀತಿಯ ಉಲ್ಲೇಖ ಮತ್ತು ಸಂವಾದಗಳೂ ದೊರಕುತ್ತವೆ. ಇದರ ಮೇಲಿಂದ ಭರದ್ವಾಜರು ಭಾರತೀಯ ಅರ್ಥಶಾಸ್ತ್ರದ ಜನಕರಾಗಿದ್ದಾರೆಂದು ತಿಳಿಯುತ್ತದೆ.



(15ನೇ ಪುಟದಿಂದ)

ತರಬೇತಿ ಶಾಲೆ, ಹಾಗೂ ಪೋಲೀಸ್ ಶಿಕ್ಷಣ ತರಬೇತಿ ಶಾಲೆಗಳಿದ್ದು ಇವುಗಳ ಪಕ್ಕದಲ್ಲಿಯೇ ವಿಜಯನಗರ ರಾಜರ ಕಾಲದ ಜಗದೇವರಾಯನಾಳಿದ 'ಚೆಂಪಪಟ್ಟಣ' ಇದೆ. ಈಗ 'ಚೆನ್ನಪಟ್ಟಣ' ಎಂದು ಹೆಸರು ಪಡೆದಿರುವ ಈ ಊರು ಜಗತ್ಪ್ರಸಿದ್ಧ 'ಬಣ್ಣದ ಆಟಿಗೆ ಸಾಮಾನು'ಗಳ ತಯಾರಿಕೆಗೆ ಹೆಸರಾಗಿ ವಿಶ್ವಮಾರುಕಟ್ಟೆಯಲ್ಲಿ ವಿಶೇಷ ಸ್ಥಾನವನ್ನು ಪಡೆದುಕೊಂಡಿದೆ. ಇದರ ಎಲ್ಲೆಯಲ್ಲಿಯೇ ಇತಿಹಾಸ ಪ್ರಸಿದ್ಧ 'ಮಳೂರು' ಅಪ್ರಮೇಯಸ್ವಾಮಿಯ ದೇವಾಲಯವೂ, ಅದಕ್ಕೆ ಹೊಂದಿಕೊಂಡಂತೆ ಒಂದು 'ಮಾಧ್ವಮಠ'ವೂ ಇದೆ. ಅಲ್ಲದೆ ಈ ಕೆಂಗಲ್ ಪ್ರದೇಶದ ಹಿನ್ನಲೆಯೂ ಸಹ ಪೌರಾಣಿಕ ಮಹತ್ವವುಳ್ಳದಾಗಿದ್ದು, ಕಣ್ವ ಋಷಿಗಳ 'ಆಶ್ರಮ' ಮತ್ತು 'ಕಣ್ವರ ಗುಹೆ'ಯನ್ನೊಳಗೊಂಡಿದೆ. 'ಕಣ್ವಾನದಿ' ಇಲ್ಲಿ ಹರಿಯುವುದರಿಂದ ಇತ್ತೀಚೆಗೆ ಈ ನದಿಗೆ 'ಅಣೆಕಟ್ಟು' ಕಟ್ಟಿ ಜಲಾಶಯವನ್ನು ನಿರ್ಮಿಸಲಾಗಿದೆ. ಹೀಗೆ ಈ ಕೆಂಗಲ್ ಪ್ರದೇಶವೆಲ್ಲಾ ದಿನೇ ದಿನೇ ಪ್ರವರ್ಧಮಾನಕ್ಕೆ ಬರುತ್ತಾ ತನ್ನ ಸುತ್ತಮುತ್ತಲಿನ ಪ್ರದೇಶವನ್ನೂ ಸಹ ಪೌರಾಣಿಕವಾಗಿ ಪ್ರತಿಬಿಂಬಿಸುತ್ತಾ, ಸಾಹಿತಿಗಳು, ಕಲಾವಿದರನ್ನೊಳಗೊಂಡಂತೆ ಎಲ್ಲ ಶ್ರೀ ಸಾಮಾನ್ಯರನ್ನೂ ಅಪಾರ ಸಂಖ್ಯೆಯಲ್ಲಿ ಆಕರ್ಷಿಸುತ್ತಿದೆ. ಇತ್ತೀಚೆಗೆ ಡಾ|| ರಾಜಕುಮಾರ್‌ರವರು ಈ ದೇವರ ಮೇಲೆ ಹಾಡಿರುವ 'ಭಕ್ತಿ ಗೀತೆಯ ಧ್ವನಿಮುದ್ರಿಕೆ'ಯೊಂದನ್ನು ಬಿಡುಗಡೆ ಮಾಡಲಾಗಿದೆ. ತಿರುಪತಿಗೆ ಪ್ರಯಾಣ ಬೆಳೆಸುವ ಈ ಸುತ್ತಮುತ್ತಲಿನ ಪ್ರಯಾಣಿಕರು ತಮ್ಮ ಪ್ರಯಾಣಕ್ಕೆ ಮೊದಲು ಈ ದೇವರಲ್ಲಿಗೆ ಬಂದು ಪೂಜೆ ನೆರವೇರಿಸಿ ತಮ್ಮ ಪ್ರಯಾಣವು ಫಲಪ್ರದವಾಗಲೆಂದು ಹರಸಿಕೊಂಡು ಮುಂದುವರಿಯುವುದು ಒಂದು ಪದ್ಧತಿಯಾಗಿದೆ.

ವರ್ಷಂಪ್ರತಿ ಜನವರಿಯಲ್ಲಿ ಮಕರ ಸಂಕ್ರಾಂತಿ ಕಳೆದ ಕೆಲವು ದಿನಗಳ ಮೇಲೆ ಇಲ್ಲಿ "ಜಾನುವಾರುಗಳ ಜಾತ್ರೆ" ನಡೆಯುತ್ತದೆ. ಹೆದ್ದಾರಿಯ ಇಕ್ಕೆಲಗಳಲ್ಲಿ ಸುಮಾರು ಎಂಟು–ಹತ್ತು ಕಿಲೋಮೀಟರ್‌ಗಳವರೆಗೂ ಕಟ್ಟಿ ಪ್ರದರ್ಶಿಸುವ ಇಲ್ಲಿನ ಎತ್ತು, ಎಮ್ಮೆ, ಕುರಿ, ಹಸು, ಮುಂತಾದ ಜಾನುವಾರುಗಳನ್ನು ಕೊಡು–ಕೊಳ್ಳುವ ವ್ಯವಹಾರಕ್ಕಾಗಿ ಕರ್ನಾಟಕದ ವಿವಿಧೆಡೆಗಳಿಂದಲೂ ರೈತರು ಇಲ್ಲಿಗೆ ಬಂದು ಹೋಗುತ್ತಾರೆ. ಕೊನೆಗೆ ಪುಷ್ಯಮಾಸದ ಕೃಷ್ಣಪಕ್ಷದ ಬಹುಳ ಸಪ್ತಮಿಯಂದು ಆಂಜನೇಯ ಸ್ವಾಮಿಯ 'ರಥೋತ್ಸವ' ನೆರವೇರುತ್ತದೆ. ಇಲ್ಲಿಗೆ ಈ ದಿನಗಳ ಪರಿಷೆಯೂ ಕೊನೆಗೊಳ್ಳುತ್ತದೆ. ★

# ಯುವವಾಣಿ

## ತೇನ ವಿನಾ ತೃಣಮಪಿ ನ ಚಲತಿ

ನಾನು – ಇದು ನನ್ನದು ನನ್ನಿಂದಲ್ಲಾ ಕೆಲಸವಾಯ್ತು – ನೀನು ನೋಡುತ್ತಾ ಇರು. ನಾನೇನು ಮಾಡುತ್ತೇನೆ ಎಂಬುದನ್ನು. ನನ್ನಿಂದಾಗದ ಕೆಲಸವೇನಿದೆ? ಎಲ್ಲವೂ ನಾನೆಣಿಸಿದಂತೆಯೇ ಸಲೀಸಾಗಿ ನಡೆದುಹೋಯ್ತು-ಹೀಗೆ ಇನ್ನೂ ಏನೇನೋ? ನಾವು ನಮ್ಮ ಹೆಂಡಿರು ಮಕ್ಕಳ ಮುಂದೆ ಇಷ್ಟ ಮಿತ್ರ ಬಂಧುಬಾಂಧವರ ಮುಂದೆ ಒಂದಲ್ಲ ಒಂದು ವಿಧದಲ್ಲಿ ಬುಡುಬುಡುಕೆಯವನಂತೆ ಬಡಾಯಿ ಕೊಚ್ಚಿಕೊಳ್ಳುತ್ತಲೇ ಇರುತ್ತೇವೆ. ನಮ್ಮ ಮಿಸೆಯ ತುದಿಯನ್ನು ತಿದ್ದಿತೀಡಿ ತಿರುವಿಕೊಳ್ಳುತ್ತಾ ಆತ್ಮಪ್ರಶಂಸೆ ಮಾಡಿಕೊಳ್ಳುತ್ತೇವೆ. ಆದರೆ ನಿಜವಾಗಿಯೂ "ನಾನು ಮಾಡಿದೆ" ಎಂಬ ಕ್ರಿಯೆ ನಿಜವಾಗಿಯೂ ನನ್ನಿಂದಲೇ ಆದುದೇ? ಅದರಲ್ಲಿ ಬೇರಿನ್ನಾರ ಕೈವಾಡವೂ ಇಲ್ಲವೇ? ಇಲ್ಲವಾಗಿದ್ದಲ್ಲಿ ನೆನೆಸಿದ ನಮ್ಮ ಕೆಲಸ ಕೆಲವೊಮ್ಮೆ ಸಲೀಸಾಗಿ ನಡೆಯುತ್ತದೆ. ಕೆಲವೊಮ್ಮೆ ನೆನೆಸಿಕೊಂಡಿದ್ದ ಕಾರ್ಯ ಕಷ್ಟವಲ್ಲದಿದ್ದರೂ ನೆನೆಗುದಿಯಲ್ಲಿ ಬೀಳುತ್ತದೆ. ಅವರಿವರ ಸಹಾಯ ಹಸ್ತ ಸಿಕ್ಕಿದರೂ ನಿಸ್ಸಹಾಯಕತೆಯಲ್ಲಿ ಏನನ್ನೂ ಸಾಧಿಸಲಾಗದೆ ಅರ್ಧದಲ್ಲಿಯೇ ನಿಲ್ಲಿಸಿಬಿಡುತ್ತೇವೆ. "ಉಸ್ಸಪ್ಪಾ ತಿರುಪತಿ ತಿಮ್ಮಪ್ಪಾ" ಎಂದು ತಲೆ ಮೇಲೆ ಕೈಹೊತ್ತು ಮುಗಿಲು ದಿಟ್ಟಿಸುತ್ತೇವೆ. ಕಣ್ಣೀರು ಸುರಿಸುತ್ತೇವೆ. ನಿಡಿದುಸಿರಿನೊಂದಿಗೆ ನಿರುತ್ಸಾಹಿತರಾಗುತ್ತೇವೆ. ಏಕೆ ಹೀಗೆ?

ಗಟ್ಟಿಮುಟ್ಟಾದ ಆಳು, ಪರೋಪಕಾರಿ, ವರುಷ ಮೂವತ್ತನ್ನೂ ದಾಟಿರಲಿಲ್ಲ. ಆರೋಗ್ಯವಂತನಾಗಿ ನಕ್ಕು ನಗಿಸುತ್ತಾ ಸುಂದರ ಹೆಂಡತಿಯ ಕೈಹಿಡಿದು ರಸಿಕತೆಯಲ್ಲಿ ಎಲ್ಲರಿಗೂ ಬೇಕಾದವನಾಗಿ ಸರಳ ಜೀವನ ಸಾಗಿಸುತ್ತಿದ್ದ ತುಂಬಿದ ಕೊಡ ಆತ. ಇದ್ದಕ್ಕಿದ್ದಂತೆಯೇ ಒಂದು ದಿನ ಅನಿರೀಕ್ಷಿತವಾಗಿ ನಡುಮಧ್ಯಾಹ್ನ ಸ್ಕೂಟರ್ ಅಪಘಾತದಲ್ಲಿ ತಲೆಯೊಡೆದು ಸತ್ತುಹೋದ. ಪಾಪ ಸಾಯಬಯಸಿ ಹೊಟ್ಟೆನೋವಿನ ಅಸಾಧ್ಯ ನೋವು ತಾಳಲಾಗದೆ ಬಾವಿಗೆ ಹಾರಿಕೊಂಡಿದ್ದ ವೃದ್ಧ ಸಾಯಲೇ ಇಲ್ಲ.

ನಡುರಾತ್ರಿ ಯಾತ್ರೆಗೆಂದು ಹೊರಟಿದ್ದ ಆ ಎರಡು ಕಾರುಗಳು ಡಿಕ್ಕಿ ಹೊಡೆದು ಆಳವಾದೊಂದು ಹೊಂಡಕ್ಕುರುಳಿದ್ದರೂ ಆಶ್ಚರ್ಯಕರ ರೀತಿಯಲ್ಲಿ ಏನೂ ಆಗದೆ ಕಾರಿನೊಳಗಿನ ಜನ ಪ್ರಾಣಾಪಾಯದಿಂದ ಪಾರಾದುದಕ್ಕೆ ಅವರೆಲ್ಲರೂ ತಿರುಪತಿ ತಿಮ್ಮಪ್ಪನ ಪರಮ ಭಕ್ತರಾದುದೇ ಸಾಕ್ಷಿ.

ಸತ್ತ ಎಂದರೆ ಸಾಯುವುದಿಲ್ಲ, ಬದುಕಿದ ಅಂದರೆ ಉಳಿಯುವುದಿಲ್ಲ. ನೀರಿನಲ್ಲಿ ಬಿದ್ದಾತನನ್ನೆತ್ತಲು ಹೋದ ಮಹಾಗಟ್ಟಿಗ ಈಜುಗಾರ ಮುಳುಗಿ ತಾನೇ ಸತ್ತುಹೋದ. ನೀರು ಕುಡಿದು ಸುಸ್ತಾಗಿ ಹೊಟ್ಟೆ ಬರೀ ಭ್ರಮೆಯೇ? ಈ ವಿಜ್ಞಾನಯುಗದಲ್ಲಿ ಪ್ರತ್ಯಕ್ಷವೂ ಸುಳ್ಳಾಗುವುದೆಂದಾಗ ನನ್ನಂತಹ ಯಃಕಶ್ಚಿತ್ ಮಾನವನಿಂದ ಈ ಗಹನವಾದೊಂದು ವಿಷಯದ ಕುರಿತು ಚರ್ಚೆ ನಡೆಸಿ, ರುಜುವಾತುಗೊಳಿಸಲು ಸಾಧ್ಯವಾದೀತೇ? ಈ ವಿಷಯದಲ್ಲಿ ಆಸ್ತಿಕ; ನಾಸ್ತಿಕ, ತಾರ್ಕಿಕ, ವಿಜ್ಞಾನಿಗಳೆಲ್ಲರ ತುಂಬುಹೃದಯದ ವಿಶಾಲ ಚರ್ಚೆ ನಡೆಯುತ್ತಲಿರುವುದನ್ನು ನೋಡುತ್ತಲೇ ಇದ್ದೇವೆ.

ಆದರೂ, ಆತ್ಮಗಳ ಆತ್ಮ ಪರಮಾತ್ಮನನ್ನು ವೇದಪುರಾಣ ಭಾಗವತಾದಿಗಳು ಬಗೆಬಗೆಯಲ್ಲಿ ಬಣ್ಣಿಸಿವೆ. ಸಂಗೀತ ಸಾಹಿತ್ಯಗಳ ಮೂಲಕ ದಾಸರನೇಕರು ಭಕ್ತಿಗೊಲಿದು

ಯುಬ್ಬರಿಸಿ ಸತ್ತಂತಿದ್ದರೂ ನೀರಿನಲ್ಲಿ ಬಿದ್ದಿದ್ದಾತ ಆಸ್ಪತ್ರೆಯಲ್ಲಿ ಬಚಾವಾದ. ನಮ್ಮ ವ್ಯಕ್ತಿಗತ ಜೀವನದಲ್ಲಿ ಹೀಗೆಯೇ ಎಷ್ಟೋ 'ಬೇಕು' ಎಂದದ್ದು ಬೇಡವಾಗುತ್ತದೆ. 'ಬೇಡ' ಎಂದು ಹೇಳಿದ್ದು ಬೇಕಾಗಿ, ಬೇಕೆಂಬ ಆಸೆಯಲ್ಲಿ ಪ್ರಯಾಸಪಡುವಂತಾಗುತ್ತದೆ.

ಮಾಡಿದ ಯತ್ನಕ್ಕೆ ಫಲವೇ ಇಲ್ಲವಾಗಿ ಕೈ ಕಟ್ಟಿ ಕುಳಿತುಬಿಟ್ಟಿದ್ದಾತನೊಬ್ಬನಿಗೆ ಅನಾಯಾಸವಾಗಿ ನಿಧಿ ದೊರಕಿ ಸಗ್ಗಕ್ಕೆ ಕೆಚ್ಚಿಡುವಂತಾಗುತ್ತದೆ. ಪ್ರಪಂಚದಲ್ಲಿ ಅಲ್ಲಲ್ಲಿ ಇಂತಹ ನೂರಾರು ವಿಪರೀತ, ನೈಜ, ವಿಪರ್ಯಾಸದ ಘಟನೆಗಳು ಅದೆಷ್ಟೋ ನಮ್ಮ ಕಣ್ಮುಂದೆಯೇ ನಡೆಯುತ್ತಲಿರುವುದನ್ನು ಪ್ರತ್ಯಕ್ಷ ಕಾಣುವಾಗಲೆಲ್ಲಾ ಪರಮಾಶ್ಚರ್ಯದೊಂದಿಗೆ ಭಯ ಭೀತಿಗಳ ಕಲ್ಪನೆಯೂ ಮೂಡುತ್ತದೆ.

ತೋರಿಕೆಗೆ ಸಿಗದೆ, ಕಣ್ಣ ಮರೆಯಲ್ಲಿ ನಮ್ಮನ್ನು ಕಾಡುವ, ಕಾಯುವ ಅತ್ಯದ್ಭುತ ಶಕ್ತಿ ಯಾವುದು? ಯಾವುದಿರಬಹುದು? ಪರಮಾತ್ಮ! ಪರಮಾತ್ಮ ನಮ್ಮ ಕಲ್ಪನೆಯ ಕೂಸೇ? ನಂಬಿಕೆಯ ರೂಪವೇ? ಅಥವಾ

ಬರುವ ಆತನ ಶಕ್ತಿ ಸಾಹಸಗಳನ್ನು ಹಾಡಿ ಹೊಗಳಿದ್ದಾರೆ. ಗೀತಾಚಾರ್ಯ ಶ್ರೀ ಕೃಷ್ಣನೇ ಅರ್ಜುನನಿಗೆ ವಿಶ್ವರೂಪದರ್ಶನದ ಮೂಲಕ ಮಹಾಭಾರತಯುದ್ಧದ ಜಯಾಪಜಯಗಳಿಗೆಲ್ಲಾ ನೀನು (ಅರ್ಜುನ) ನಿಮಿತ್ತ ಮಾತ್ರ ಎಂಬುದನ್ನು ಅರಿತುಕೊಳ್ಳುವಂತೆ ಮಾಡಿದ್ದಾನೆ. ಇನ್ನು ಆಚಾರ್ಯತ್ರಯರುಗಳು ತಮ್ಮ ವಾದ ವಿವಾದ ಪ್ರತಿಪಾದನೆಗಳ ತತ್ತ್ವವನ್ನೊಳಗೊಂಡ ದ್ವೈತ ಅದ್ವೈತ ವಿಶಿಷ್ಟಾದ್ವೈತಗಳ ಮೇರು ಸದೃಶ ಅಪೂರ್ವ ರತ್ನ ಗ್ರಂಥಗಳನ್ನೇ ನಮ್ಮ ಮುಂದಿಟ್ಟು ಹೋಗಿದ್ದಾರೆ – ನಮಗಿಷ್ಟು ಸಾಲದೇ? ಆತ್ಮನ ಅಂತರಾತ್ಮದ ಸಚೇತಕ ಶಕ್ತಿಯೇ ಆಗಿರುವ ಅವನು 'ಪರಮಾತ್ಮ'. ಕಾಲಾತೀತ, ಕಾಲನಿಯಾಮಕ. ಅವನನ್ನೇ ನಾವಿಲ್ಲಿ ಕರೆಯುವುದು 'ತೇನವಿನಾ'. ಪ್ರಾಣಿಗಳಿಗಿಂತ ನಮ್ಮನ್ನು ಮೇಲಕ್ಕೇರಿಸಿ ಆತನೇ ನಮ್ಮ ತೋಳ್ಗಳಿಗೆಡರಲ್ಲೂ ಸಮ ಬಲತುಂಬಿಸಿ ಚಿಕ್ಕದಾಗಿದ್ದರೂ ಚುರುಕಾಗಿ ಓಡುವ ನಮ್ಮ ಮಿದುಳಿನಲ್ಲಿ ಅಖಂಡ ಜ್ಞಾನ ಸಂಪತ್ತನ್ನು ಅಡಗಿಸಿಟ್ಟಿದ್ದಾನೆ.

ಆದರೆ ಮನಸ್ಸನ್ನು ಮಾತ್ರ ಚಂಚಲ

**ಸಿ. ವಿ. ಕೃಷ್ಣತಂತ್ರಿ**

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಗೋಳಿಸಿ, ಮಾಯಾಮೋಹದ ಲೇಪನ ಬಳಿದು ಕಾಲಕ್ಕನುಗುಣವಾಗಿ ಬಗೆ ಬಗೆಯ ಕಾಮನೆಗಳನ್ನು ಕೆರಳಿಸುತ್ತಾ ನಮ್ಮಾ ರಕ್ತ ಮಾಂಸಾದಿಗಳ ಎಲುಬಿನ ಹಂದರವನ್ನು 'ತನ್ನ ಕಾಣದ ಕೈಯ' ಬುಗುರಿಯಾಗಿ ಪರಿವರ್ತಿಸಿಕೊಂಡುದುದು ಅವನ ಲೀಲಾ ವಿನೋದದ ವಿಶೇಷತೆಯಲ್ಲದೆ ಮತ್ತಿನ್ನೇನು! 'ತೃಣಮಪಿನಚಲತಿ'-ಹುಲ್ಲು ಕಡ್ಡಿಯೂ ಅಲುಗಾಡದು. ನೆಲದಲ್ಲಿ ಬಿದ್ದುಕೊಂಡಿರುವ ಕೆಲಸಕ್ಕೆ ಬಾರದ ಹುಲುಕಡ್ಡಿಯೆಂಬ ತಾತ್ಸಾರದಲ್ಲಿ ನಾವದನ್ನು ಕಡೆಗಣಿಸ ಹೋದರೆ ಅದು ನಮಗೆ ದಕ್ಕದೆ ಹುಲ್ಲು ಹೂವಾಗಬಹುದುದು. ಹೂವು ಹಾವಾಗ ಬಹುದು. ಹಾವು ಉಪದ್ರಕಾರಕ ಜಂತುವಾಗಿ ಹುಲ್ಲಿನಮೇಲೆ ಕಾರಿದ್ದು ನಮ್ಮ ಮೇಲೆ ವಿಷದ ಪರಿಣಾಮಕಾರಿ ಪ್ರಯೋಗ ನಡೆಸ ಬಹುದು. ಅವನ ಸಂಕಲ್ಪಕ್ಕೆದುರು ಯಾವುದೂ ಎಣೆಯಿಲ್ಲ. ಅಸಾಧ್ಯವೆಂಬುದು ಯಾವುದೂ ಇಲ್ಲ. ವಿಶ್ವಾಂತರ್ಗತನಾಗಿ, ವಿಶ್ವವನ್ನೇ ವ್ಯಾಪಿಸಿಕೊಂಡಿರುವ, ವಿಶ್ವರೂಪೀ ಭಗವಂತನ ಇಚ್ಛೆಯಿಂದಲ್ಲವೇ ಈ ಪ್ರಪಂಚ ನಡೆಯುತ್ತಿರುವುದು. ಅವನ ಸಂಕಲ್ಪದೆದುರು ನಾವು ತೃಣ ಸಮಾನರು, ಅಲ್ಪರು- ಮೇರು ಪರ್ವತವೆಲ್ಲಿ! ಸಮುದ್ರದ ಹೊಯ್ಗೆ ಕಣವೆಲ್ಲಿ? ನಾವುಗಳು ಆತ್ಮರು. ಶರೀರಹೊತ್ತ ವೇಷಧಾರಿಗಳು. ಪರಸ್ಪರ ಅವಲಂಬನೆಯಿಂದಲೇ ನೀರಮೇಲಣಗುಳ್ಳೆಯಂತೆ ಶಾಶ್ವತವಾದೊಂದು ಜಗತ್ತಿನಲ್ಲಿ ಕಾಮ, ಕ್ರೋಧ, ಲೋಭ, ಮೋಹಗಳ ಜಾಲದಲ್ಲಿ ಬಿದ್ದು ಹೊರಳಾಡುತ್ತಿದ್ದೇವೆ. ಮಾಯಾಪಾಶದಲ್ಲಿ ಬಿಗಿಯಾಗಿ ಬಂಧಿಸಲ್ಪಟ್ಟಿದ್ದೇವೆ.

ಸಂಸಾರವೆಂಬ ಮಹಾನ್ ಸಾಗರದಲ್ಲಿ ಈಜಿ ದಡಸೇರಿಕೊಳ್ಳಲಾಗದ ಮುಳುಗಡೆಯ ಸ್ಥಿತಿಯಲ್ಲಿ ಕಂಗಾಲಾಗಿ ಎತ್ತೆತ್ತಲೋ ಹರಿದಾಡುತ್ತಿದ್ದೇವೆ. ಕಾಲಚಕ್ರದ ಉರುಳಿನಲ್ಲಿ ಒಮ್ಮೆ ಮೇಲೆ, ಇನ್ನೊಮ್ಮೆ ಕೆಳಕ್ಕೆ, ಏರುತ್ತಾ ಬೀಳುತ್ತಾ ಬಡಬಡಿಸುತ್ತಿದ್ದೇವೆ. ರಾತ್ರಿಹಾರೈಸುತ್ತೇವೆ. ಹಗಲು ಸ್ವಾಗತಿಸುತ್ತೇವೆ. ದಿನನಿತ್ಯದ ಕೆಲವು ತಾಸುಗಳಲ್ಲಿ ಅನ್ನಸಂಪಾದನಾಕಾರ್ಯಾಂಗದಲ್ಲಿ ಹೆಣಗುತ್ತೇವೆ. ಈ ಹೆಣಗುನೆಣಸುಗಳ ಪರದಾಟದಲ್ಲಿ ನಾವೆಷ್ಟು ಹಗಲು ರಾತ್ರಿಗಳನ್ನು ಕಳೆಯುತ್ತೇವೆಂಬುದರ ಸಂಪೂರ್ಣ ಮಾಹಿತಿಯೂ ನಮಗಿಲ್ಲ. ಹೀಗಿದ್ದರೂ ಸಿಕ್ಕಿದ್ದ ಈ ಅಲ್ಪ ಸಮಯದಲ್ಲಿ ನಾನು ಮೇಲು, ನೀನು ಕೀಳು ಎಂಬ ಅಲ್ಪತನದ ಭಾವನೆಯಲ್ಲಿ ಪರಸ್ಪರ ಕಿಡಿಕಾರುತ್ತಿದ್ದೇವೆ. ವ್ಯರ್ಥಕಾಲಕಳೆಯುತ್ತಾ, ಆತ್ಮೋನ್ನತಿಯ ಸಾಧನೆಯಲ್ಲಿ ಬಹುಹಿಂದೆ ಬಿದ್ದಿದ್ದೇವೆ.

ಆತ್ಮ ಪರಮಾತ್ಮ, ವಾಹನ ಚಾಲಕರಿದ್ದಂತೆ-ವಾಹನ ನಡೆಸುವರೆ ಒಬ್ಬ ಚಾಲಕ ಬೇಕು. ಚಾಲಕನಿಲ್ಲದೆ ವಾಹನ ಮುಂದೆ ಹಿಂದೆ ಹೋಗದು, ತನ್ನಿಚ್ಛೆಯಂತೆಯೇ ವಾಹನ ನಡೆಸಿಕೊಂಡು ಹೋಗುವ ಚಾಲಕ ಬೇಕೆಂದಾಗ ಬೇಕಾದಷ್ಟೇಗತಿಯಲ್ಲಿ ಅದನ್ನು ನಡೆಸುತ್ತಾನೆ. ಗುರಿ ತಲ್ಪಿಸುತ್ತಾನೆ. ಬೇಡವೆಂದಾಗ ಅದನ್ನು ನಿಂತಲ್ಲಿಯೇ ನಿಲ್ಲಿಸಿಬಿಡಲೂ ಆತನಿಗೆ ಗೊತ್ತು. ವಾಹನ ಯಾಂತ್ರಿಕತೆಯ ದೋಷಗಳನ್ನು ಹುಡುಹುಡುಕಿ ಅದನ್ನು ಸರಿಪಡಿಸಲೂ ಬಲ್ಲ ಆತ, ಪ್ರಯತ್ನ ನಡೆಸಬಹುದು. ಹೀಗೆ ವಾಹನದ ಜವಾಬ್ದಾರಿ ಸಂಪೂರ್ಣ ಚಾಲಕನ ವಶದಲ್ಲಿದೆ. ಅದು ಅವನ ಮಾಂತ್ರಿಕತೆಯಲ್ಲಿ, ಚಾಕಚಕ್ಯತೆಯಲ್ಲಿ ನಡೆಸಲ್ಪಡುವ ನಿಯಮಿತ ಆಯುಷ್ಯದ ಸಾಧನ.

ವಾಹನ ಹೇಗೆ ಚಾಲಕನ ಕೈಯ ಆಧೀನವೋ ಹಾಗೆಯೇ ನಾವು ಪರಮಾತ್ಮನ ಆಧೀನರಾಗಿದ್ದೇವೆ. ಎಲ್ಲೆಲ್ಲಿಯೂ ಎಲ್ಲೆದರಲ್ಲೂ ಎಲ್ಲವೂ ಆಗಿರುವ ಪರಮಾತ್ಮ ಅಣುರೇಣು ತೃಣಕಾಷ್ಠಗಳಲ್ಲೆಂಬಂತೆ ಸಮಸ್ತ ಚರಾಚರ ಜೀವಜಂತುಗಳಲ್ಲದರ ಮೂಲಸ್ವರೂಪವಾಗಿ, ಸ್ಫೂರ್ತಿ ಬಿಂದುವಾಗಿ ಹಗಲೂ ರಾತ್ರಿ ಜಾಗ್ರತಾವಸ್ಥೆಯಲ್ಲಿದ್ದುಕೊಂಡು ನಮ್ಮನ್ನು. ಆತ್ಮರುಗಳನ್ನ ಕಾಯುತ್ತಾ, ನೋಡುತ್ತಾ ಇದ್ದಾನೆ. ಆತ ಒಂದರೆಕ್ಷಣ ನಮ್ಮ ಕೈಬಿಟ್ಟನಂದರೆ ವಿದ್ಯುತ್‌ಚಾಲನ ಶಕ್ತಿಯ ಬೆಳಕಿಲ್ಲದೆ ಬುರುಡೆಯಂತೆಯೇ ನಾವು ಪ್ರಪಂಚದಲ್ಲಿ ಕಾಣಿಸುವುದೇ ಇಲ್ಲ. ನಾನುನಾನೆಂಬ "ಆತ್ಮ" ನಿಶ್ಚೇಷ್ಟಿತಗೊಂಡು ನಿಷ್ಕ್ರಿಯವಾಗಿ ನಿದ್ರಾವಸ್ಥೆಯಲ್ಲಿಯೇ ಮಾಯವಾಗಬಹುದು, ಮಣ್ಣಲ್ಲಿ ಮಣ್ಣಾಗಿ ಸೇರಿಕೊಳ್ಳಬಹುದು.



# ಸರ್ವ ವೇದಗಳ ಸಾರ ಪ್ರಣವ

ಗಾಯತ್ರಿಯಲ್ಲಿ ಪ್ರಥಮ ಪ್ರಣವ ಇದೆ. ಅದರ ನಂತರ ವ್ಯಾಹೃತಿ ಮತ್ತು ಮೂಲ ಮಂತ್ರ ಗಾಯತ್ರಿ.

ಪ್ರಣವದ ವ್ಯಾಖ್ಯೆ ವೃದ್ಧಹಾರೀತ ಸ್ಮೃತಿಯಲ್ಲಿ ಈ ರೀತಿ ಮಾಡಲ್ಪಟ್ಟಿದೆ.

ಅಕಾರಂ ಚಾಪ್ಯುಕಾರಂ ಚ
ಮಕಾರಂ ಚೇತಿ ತತ್ತ್ವತಃ।
ತಾನ್ಯೇಕಧಾ ಸಮಭ
ವತ್ತದೋಮಿತ್ಯೇ ತದುಚ್ಯತೆ ।೫೦॥
ತಸ್ಮಾದೋಮಿತಿ ವಿಜ್ಞೇಯಃ
ಪ್ರಣವಃ ಸಾಕ್ಷರಾನ್ವಿತಃ
ವೇದತ್ರಯಾತ್ಮಕಂ ಜ್ಞೇಯಂ
ಭೂರ್ಭುವಃ ಸ್ವರ ತೀತಿ ವೈ ।೬೦॥
ಅಕಾರಸ್ತು ಭವೇದ್ವಿಷ್ಣು
ಸ್ತತ್ ಋಗ್ವೇದ ಉದಾಹೃತಃ।
ಉಕಾರಸ್ತು ಭವೇಲ್ಲಕ್ಷ್ಮೀ
ರ್ಯಜುರ್ವೇದಾತ್ಮ ಕೋ ಮಹಾನ್
।೬೧॥
ಮಕಾರಸ್ತು ಭವೇಜ್ಜೀವ
ಸ್ತಯೋರ್ದಾಸ ಉದಾಹೃತಃ।
ಚತುರ್ವಿಂಶಾಕ್ಷರಃ ಸಾಕ್ಷಾ
ತ್ಸಾಮವೇದ ಸ್ವರೂಪವಾನ್ ॥೬೨॥

ಅಕಾರ, ಉಕಾರ ಮತ್ತು ಮಕಾರ ಒಂದಾಗುವುದರಿಂದ 'ಓಂ' ಎಂದು ಕರೆಯಲ್ಪಡುತ್ತದೆಯೆ? ಮೂರು ಅಕ್ಷರಗಳ ಸಂಯೋಗದಿಂದ ಪ್ರಣವದ ಗೂಢಾರ್ಥ ವಾಗುತ್ತದೆ; ಮತ್ತು ಪ್ರಣವ ಹಾಗೂ ಭೂರ್ಭುವಃಸ್ವಃ ದಿಂದ ಮೂರು ವೇದಗಳ ಅರಿವು ಉಂಟಾಗುತ್ತದೆ.

ಅಕಾರದಿಂದ ಋಗ್ವೇದ ಮತ್ತು ಭಗವಾನ್ ವಿಷ್ಣು ಉಕಾರ ದಿಂದ ಯಜುರ್ವೇದ ಮತ್ತು ಲಕ್ಷ್ಮಿಯೇ ಅಲ್ಲದೆ, ವರ್ಣಮಾಲೆಯ 25 ನೆಯ ವ್ಯಂಜನ ಮಕಾರದಿಂದ ಸಾಕ್ಷಾತ್ ಸಾಮವೇದ ರೂಪದಿಂದ ನಾರಾಯಣ ಮತ್ತು ಲಕ್ಷ್ಮಿಯರ ದಾಸರೂಪಿಯಾದ ಜೀವದ ಜ್ಞಾನ ಉಂಟಾಗುತ್ತದೆ.

ಭಗವಾನ್ ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ಹೇಳಿದ್ದಾನೆ

ಓಂ ಮಿತ್ಯೇಕಾಕ್ಷರಂ ಬ್ರಹ್ಮ
ವ್ಯಾಹರನ್ಮಾಮನು ಸ್ಮರನ್।
ಯಃ ಪ್ರಯಾತಿ ತ್ಯಜನ್‌ದೇಹಂ
ಸ ಯಾತಿ ಪರಮಾಂಗತಿಮ್॥

ಅಂದರೆ-ಯಾರು ಯಾವ ಅಕ್ಷರ ರೂಪೀ ಬ್ರಹ್ಮನ ಧ್ಯಾನ ಮಾಡುತ್ತಾ ಪಾರ್ಥಿವ ಶರೀರವನ್ನು ಬಿಡುತ್ತಾನೋ. ಅವರು ಅವಶ್ಯ ಪರಮಗತಿಯನ್ನು ಪಡೆಯುತ್ತಾರೆ.

ಪ್ರಣವ ಬ್ರಹ್ಮದ ಅರಿವು ಮತ್ತು ಸರ್ವ ವೇದಗಳ ಸಾರವಾದುದೇ ಇದಕ್ಕೆ ಕಾರಣ.

"ಮಂತ್ರಾಣಾಂ ಪ್ರಣವಃ ಸೇತುಃ" ಪ್ರಣವ ಮಂತ್ರಗಳಿಗೆಲ್ಲಾ ಸೇತು ರೂಪ. ಎಲ್ಲಾ ವೈದಿಕ ಮಂತ್ರಗಳು ಪ್ರಣವ ದಿಂದಲೇ ಪ್ರಾರಂಭ ವಾಗುತ್ತವೆ. ಯೋಗ ಶಾಸ್ತ್ರಕಾರ ಮಹರ್ಷಿ ಪತಂಜಲಿ ಹೇಳುವುದು 'ತಸ್ಯ ವಾಚಕಃ ಪ್ರಣವಃ' ಅರ್ಥಾತ್ ಪ್ರಣವ ಬ್ರಹ್ಮದ (ನ) ವಾಚಕವು. ಪ್ರಣವಣ ಮಹಿಮೆಯಲ್ಲಿ ರಾಜರ್ಷಿ ಮನುವು-

ಕ್ಷರಂ೩ ಸರ್ವಾ ವೈದಿಕ್ಯೋ
ಜುಹೋತಿ ಯಜತಿ ಕ್ರಿಯಾಃ
ಅಕ್ಷರ ಮಕ್ಷಯಂ ಜ್ಞೇಯಂ
ಬ್ರಹ್ಮ ಚೈವ ಪ್ರಜಾಪತಿಃ।

ಇತ್ಯಾದಿಯಾಗಿ ಹೇಳಿದ್ದಾನೆ. ಪ್ರಣವದ ಮಹಿಮೆ ಅನಂತ.

ಪ್ರಣವ ಉಪದೇಶದಿಂದ ಅದ್ವೈತ ಸತ್ಯದ ಅನುಭೂತಿಯೂ ಉಂಟಾಗುತ್ತದೆ

**ಶ್ರೀಮತಿ ಕಲ್ಯಾಣಿ ಮೂರ್ತಿ**

ಮತ್ತು ಎಲ್ಲವೂ ಒಂದೇ ಎಂಬುದೂ ನಮಗೆ ತಿಳಿಯುತ್ತದೆ. ಪರಮ ಸತ್ತ್ವ ಒಂದೇ ಆದರೆ ಅದರ ಅಭಿವ್ಯಕ್ತಿಗಳು. ಅನಂತ ಸತ್ಯ ಒಂದೇ ಆದರೆ ಅದರ ರೂಪ ಅನೇಕ. ಅಸ್ತಿತ್ವವೂ ಒಂದೇ ಆದರೆ ಅದರ ಮುಖಗಳು ಅಥವಾ (ಮುದ್ರೆಗಳು) ಭಂಗಿಗಳು ಅನೇಕ.

ಓಂ ಶಬ್ದಾತೀತ ಮತ್ತು ಅರ್ಥಾತೀತ ಸತ್ಯದ ಪ್ರತೀಕ. ಅದು ಅದರ (ತನ್ನ) ಮುಂದೆ ಸ್ವಲ್ಪ ಗೋಚಿಸಲೂ, ಅದರ ಬಗ್ಗೆ ಮಾತುಕತೆ ಯಾಡಲೂ ಸಾಧ್ಯವಿಲ್ಲವೆಂಬುದರ ಸೂಚಕವೂ ಹೌದು. ಈಗ ಶಾಂತ ರಾಗಲೇ ಬೇಕು. ಆದ್ದರಿಂದ ಪ್ರತಿಯೊಂದು ಶಾಸ್ತ್ರದ ಕೊನೆಯಲ್ಲೂ-ಓಂ ಶಾಂತಿಃಶಾಂತಿಃ ಶಾಂತಿಃ-ಎಂದು ಬರೆಯಲ್ಪಡುತ್ತದೆ. ಓಂ ಪವಿತ್ರತಮವಾದದ್ದು ಮತ್ತು ಅಂತಿಮವೂ ಹೌದು ಏಕೆಂದರೆ, ಅದನ್ನು ದಾಟಿ ಹೋಗಲಾಗುವುದಿಲ್ಲ. ಅಲ್ಲಿ ಎಲ್ಲವೂ ವಿಲೀನ ವಾಗುತ್ತದೆ. ಮತ್ತು ನಶಿಸಿ ಹೋಗುತ್ತದೆ ಅಲ್ಲಿ ಅದು ಮಾತ್ರವೇ ಉಳಿಯುತ್ತದೆ.

ನಿರ್ವಿಕಾರ ಚೇತನದಲ್ಲಿ ಮಾತ್ರ ಓಂ ಪ್ರಕಟವಾಗುತ್ತದೆ. ಮತ್ತು ಇದರಿಂದಲೇ ಇದು ಯಾವುದೇ ಧರ್ಮದ. ಸಂಪ್ರದಾಯದ ಆಸ್ತಿ (ಸ್ವತ್ತು) ಅಲ್ಲ. ನಿಜವಾಗಿ ಯಾರಾದರೂ, ಎಂದಾದರೂ ನಿರ್ವಿಕಾರರಾದಾಗ ಅವರೊಳಗೆ ಅ ಉ ಮ ಗಳು ಧ್ವನಿತ ವಾಗುತ್ತವೆ ಆ ಮೂರಕ್ಷರಗಳ ಯೋಗ ದಿಂದ ಅವರ ಮನಸ್ಸಿನಲ್ಲಿ ಕೇವಲ ಓಂ ನ ಧ್ವನಿಯೇ ಧ್ವನಿತವಾಗುತ್ತಿರುತ್ತದೆ. ಅಲ್ಲದೆ ಎಲ್ಲ ವಿಚಾರಗಳು ಅಡಗಿ ಹೋಗುತ್ತವೆ.

ಪ್ರತಿಯೊಂದು ಭಾಷೆಯ ಮೂಲಧ್ವನಿಗಳೂ ಈ-ಅ ಉ ಮತ್ತು ಮ ಕಾರಗಳೇ ಹೌದು ಭಾಷಾತಜ್ಞರ ಹೇಳಿಕೆಯೆಂದರೆ ಈ ಮೂರು ಮೂಲ ಧ್ವನಿಗಳಿಂದಲೇ ಬೇರೆ ಧ್ವನಿಗಳ, ಅಕ್ಷರಗಳ ಮತ್ತು ಶಬ್ದಗಳ ಜನ್ಮ ಉಂಟಾಗಿದೆ. ಈ ಧ್ವನಿಗಳಿಗೆ ಬೇರೆ-

ಬೇರೆಯಾಗಿ ಅರ್ಥವಿಲ್ಲ. ಅವು ಶಬ್ದವಾದಾಗ ಅರ್ಥ ನಿಶ್ಚಿತವಾಗುತ್ತದೆ ಎಂಬುದು ಒಂದು ರೋಚಕ ತಥ್ಯ.

ಪ್ರಣವ ಅಂದರೆ ಓಂ ನ ಪ್ರತೀಕ– 'ಇದು' ಮತ್ತು 'ಅದ'ರ ಪರಮ ಸತ್ಯ ಮತ್ತು ಸಾಪೇಕ್ಷಿಕ ಸತ್ಯದ ಪ್ರತೀಕ. ಅ ಉ ಮತ್ತು ಮ ಬೇರೆ–ಬೇರೆ ಸಾಪೇಕ್ಷಿಕ ಸತ್ಯದ ಮತ್ತು ಅವುಗಳ ಯೋಗ ಓಂ ಪರಮ ಸತ್ಯದ ಪ್ರತೀಕ. ವ್ಯಕ್ತಿಯ ಜಾಗ್ರತಾವಸ್ಥೆ ಅಂದರೆ 'ವಿಶ್ವ'ದ ಪ್ರತೀಕ – ಅ. ವಿರಾಟ್ ಚೇತನದ ಅಭಿವ್ಯಕ್ತಿಯೂ ಇದರಿಂದಾಗುತ್ತದೆ. ವ್ಯಕ್ತಿಯ ಸ್ವಪ್ನಾವಸ್ಥೆಯ ತೇಜಸ್ಸಿನ, ಹಿರಣ್ಯಗರ್ಭನ ಪ್ರತೀಕ 'ಉ'. ನಿರ್ವಿಚಾರಗೊಳ್ಳುವ ಚೈತನ್ಯಗಳಿಲ್ಲದರ ಅಂದರೆ ಆ ಪೂರ್ಣಮೌನದ, ಆ ಪರಮಶೂನ್ಯದ ಪ್ರತೀಕ 'ಮ'. ಎಲ್ಲಾ ವಿಚಾರವೂ ಹಾಳಾಗುತ್ತದೆ. ಕೇವಲ ಅನಾದಿ ಮತ್ತು ಅನಂತ ಮಾತ್ರ ಉಳಿಯುತ್ತದೆ.

ಅ ಉ ಮತ್ತು ಮ ಗಳಲ್ಲಿ ಎಲ್ಲಕ್ಕಿಂತ ಅಧಿಕವಾದ ಮಹತ್ತ್ವವಿದೆ. ಮ, ಅ ಉ ಗಿಂತಲೂ ಆಗಾಗ್ಗೆ ಕೇವಲ ತನ್ನ ಧ್ವನಿಯೇ ಕೇಳುವಷ್ಟು ಯಶಸ್ಸು ಕೊಡುತ್ತದೆ. ಹಾಗೆಯೇ ಅದೇ ಎಲ್ಲಕ್ಕಿಂತ ಮೇಲಾಗಿ ಸಾರ್ವಭೌಮ ಮತ್ತು ಸರ್ವವ್ಯಾಪಿಯಾಗುತ್ತದೆ.

ಧ್ಯಾನಾವಸ್ಥೆಯನ್ನು ತಲುಪಿ. ಇಡೀ ವಿಶ್ವದ ಸಾಧಕರುಗಳಿಗೆ ಆದ ಪರಮ ಅನುಭೂತಿಯೆಂದರೆ, ಯಾರು ಅಗಮ್ಯ, ಅಗೋಚರ ಮತ್ತು ಅವರ್ಣನೀಯನೋ ಅವನ ಪ್ರತೀಕವೇ ಪ್ರಣವ (ಓಂ) ಆದರೆ ಈ ಅನುಭೂತಿಯನ್ನು ವ್ಯಕ್ತ ಪಡಿಸುವುದು ಬಹಳ ಕಠಿಣವಾದುದು. ಕಾರಣ ಪರಮಶೂನ್ಯ–ನಿರ್ವಾಣವನ್ನು ಯಾವ ಶಬ್ದಗಳಿಂದ ಮತ್ತು ಯಾವ ವಿಧಿಯಲ್ಲಿ ವ್ಯಕ್ತ ಮಾಡುತ್ತಾನೋ ಅವನೂ ಸಹ ಆ ಅನುಭೂತಿಯಲ್ಲಿ ಉಳಿಯುವುದಿಲ್ಲ. ಆದ್ದರಿಂದ ಅದರ ವರ್ಣನೆ ಎಲ್ಲಾ ಶಾಸ್ತ್ರ ಮತ್ತು ಧರ್ಮಗ್ರಂಥಗಳಲ್ಲಿ ನಿಷೇಧಾತ್ಮಕ ರೂಪದಲ್ಲಿ ಮಾಡಲ್ಪಟ್ಟಿದೆ. ನೇತಿ ನೇತಿ; ಇದೂ ಅಲ್ಲ – ಅದೂ ಅಲ್ಲ. ಹಾಗಾದರೆ ಮತ್ತೇನು!

ಹಾಗಿದ್ದಮೇಲೆ ಇದಕ್ಕೆ ಉತ್ತರ ಶಾಂತವಾಗಿಯೇ ಕೊಡಲ್ಪಡುತ್ತದೆ. ಏಕೆಂದರೆ ಶಬ್ದಗಳಿಂದ, ಸಂಜ್ಞೆಗಳಿಂದ ಯಾವುದೇ ವಿಧಿಯಿಂದ ವ್ಯಕ್ತಪಡಿಸಲಾಗುವುದಿಲ್ಲ. ಇಲ್ಲದಿರುವುದನ್ನು ಹೇಗೆ ತಿಳಿಯ ಪಡಿಸುವುದು! ಹೇಗೆ ಅರ್ಥಮಾಡಿಸುವುದು? ಪ್ರಣವ ಅಸ್ತಿತ್ವವಲ್ಲ, ಅಸ್ತಿತ್ವದ ಪ್ರತೀಕ, ಅದನ್ನು ಯಾರುತಾನೆ ತಿಳಿಯುವರು! ಅದರ ಬಗ್ಗೆ ಏನು ತಾನೆ ಹೇಳುವುದು!

ಹಾಗೆಯೇ ಯಾರಾದರೂ ಏನಾದ್ದರೂ ಹೇಳಿದ್ದಲ್ಲಿ ಅದು ಅಸ್ತಿತ್ವವಾಗುತ್ತದೆ, ಅನಸ್ತಿತ್ವವಾಗಿ ಉಳಿಯುವುದಿಲ್ಲ.

ಇದೇ ಕಾರಣದಿಂದ ಓಂ ಬ್ರಹ್ಮ (ಅಸ್ತಿತ್ವ) ಎಂಬುದರ ಸೂಚನೆಯನ್ನು ಕೊಡುತ್ತದೆ. ಆ ಅನಸ್ತಿತ್ವಕ್ಕೆ ಯಾವಾಗ ಯಾವುದೇ ರೂಪವಿಲ್ಲವೋ ಆಕಾರವಿಲ್ಲವೋ ಅಲ್ಲಿ ಏನೂ ಇಲ್ಲವೇ ಇಲ್ಲ. ಆದರೂ ಎಲ್ಲವೂ ಇದೆ. ಏಕೆಂದರೆ ಪರಮಶೂನ್ಯವಾದ್ದು ಪೂರ್ಣವೂ ಆಗಿದೆ, ಪರಮ ಶಾಂತಿಯೂ ಆಗಿದೆ.



# ಕರ್ನಾಟಕ ಸಂಸ್ಕೃತಿ

(ಹಿಂದಿನ ಸಂಚಿಕೆಯಿಂದ)

ಕರ್ನಾಟಕದ ಅನೇಕ ರಾಜಧಾನಿಗಳು ಬಹು ವೈಭವದಿಂದಿದ್ದದ್ದು ಸಾಹಿತ್ಯದಲ್ಲಿಯೂ ಶಾಸನಗಳಲ್ಲಿಯೂ ಕಂಡು ಬರುತ್ತದೆ. ಬಾದಾಮಿಯು ಅದಕ್ಕೆ ಒಳ್ಳೆಯ ನಿದರ್ಶನ. ಇದು ನೈಸರ್ಗಿಕವಾಗಿ ಸುರಕ್ಷಿತವಾದ ನಿವೇಶನದಲ್ಲಿ ನಿರ್ಮಿತವಾದ ನಗರ. ಸುತ್ತಲೂ ಬೆಟ್ಟಗುಡ್ಡಗಳ, ವಾತಾಪಿಯ ಗುಡ್ಡದ ಬುಡದಿಂದ ತುದಿಯವರೆಗೆ ಒಂದು ಇಕ್ಕಟ್ಟಾದ ಕಣಿವೆ ಮಾರ್ಗವನ್ನು ನಿರ್ಮಿಸಿಕೊಂಡು ಒಂದನೆಯ ಪುಲಕೇಶಿಯು ಭದ್ರವಾದ ಕೋಟೆಯನ್ನು ಕಟ್ಟಿಸಿ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಅದರ ಪ್ರಾಚೀನ ಹೆಸರು ವಾತಾಪಿಯೆಂದು. ಅದು ಒಂದು ಅಧಿಷ್ಠಾನ, ಅಲ್ಲಿ ೩೦೦೦ ಬ್ರಾಹ್ಮಣರು ವಾಸವಾಗಿದ್ದರು. ಒಂದು ಪ್ರಮುಖವಾದ ವಿದ್ಯಾಕೇಂದ್ರ. ವಿನಯಾದಿತ್ಯನ ರಾಣಿ ವಿನಯವತಿ ಈ ಪಟ್ಟಣದಲ್ಲಿ ಬ್ರಹ್ಮ ವಿಷ್ಣು ಶಿವಾಲಯಗಳನ್ನೂ ಕಟ್ಟಿಸಿದಳು. ಇಲ್ಲಿ 'ಪ್ರಸ' ಎಂಬ ಶಿಲಾವಿಗ್ರಹವೂ ಎಪ್ಪತ್ತು ಅಡಿ ಎತ್ತರದ ಬುದ್ಧ ವಿಗ್ರಹವೂ ಇದ್ದವಂತೆ. ಮಹಾಕೂಟ, ಪಟ್ಟದಕಲ್ಲು ಮತ್ತೂ ಐಹೊಳೆ ಇತರ ರಾಜಧಾನಿಗಳು. ಮಹಾಕೂಟವು ಪ್ರಾಚೀನ ರಾಜಧಾನಿಯೂ ವಿದ್ಯಾಕೇಂದ್ರವೂ ಆಗಿತ್ತು. ಮಹಾಕೂಟೇಶ್ವರ ದರ್ಶನಕ್ಕೆ ರಾಜರಾಣಿಯರು ಬರುತ್ತಿದ್ದರು. ಪಟ್ಟದಕಲ್ಲೆಂಬುದು ಪಟ್ಟಾಭಿಷೇಕದ ಸ್ಥಳ, ಇಲ್ಲಿ ಪ್ರಾಚೀನವಾದ ದೇವಾಲಯಗಳಿವೆ. ಐಹೊಳೆಯೂ ಒಂದು ಬೃಹತ್ ವಿದ್ಯಾಕೇಂದ್ರ, ೫೦೦ ಮಂದಿ ಚತುರ್ವಿದ್ಯಾಸಮುದಾಯಕ್ಕೆ ಇದು ವಾಸಸ್ಥಾನವಾಗಿತ್ತು. ಇದೂ ಒಂದು ರಾಜಧಾನಿಯಾಗಿತ್ತು. ಪಾಂಡುರಂಗಪಳ್ಳಿಯೇ ಈಗಿನ ಪಂಢರಪುರ. ೭ನೆಯ ಶತಮಾನದಿಂದಲೇ ಸುಪ್ರಸಿದ್ಧವಾದ ಪಟ್ಟಣವಾಗಿತ್ತು. ಅಲ್ಲಿಯ ವಿಠಲದೇವರೂ ಅಂದಿನಿಂದಲೇ ಸುಪ್ರಸಿದ್ಧವಾಗಿದ್ದವರು. ಈ ನಗರದ ಜಯಭಟ್ಟರು ೪೦೦ ಜನ ಬ್ರಾಹ್ಮಣರಿಗೆ ಆಚಾರ್ಯರಾಗಿದ್ದರು. ಮಧ್ಯಕಾಲದ ವಿಜಯನಗರವಂತೂ ವಿದೇಶೀಯರಾದ ಪಾಯಿಸ್, ನ್ಯೂನಿಜ್, ಕಾಂಟಿ, ಅಬ್ದುರ್‌ರಜಾಕ್ ಮೊದಲಾದವರಿಂದ ವಿಶೇಷವಾಗಿ ಸ್ತುತಿಸಲ್ಪಟ್ಟಿದೆ. ಅವರ ಪ್ರಕಾರ ಅದರ ಸುತ್ತಳತೆ ೬೦ ಮೈಲಿಯಂತೆ. ರೋಮ್ ನಗರಕ್ಕಿಂತ ದೊಡ್ಡದು. ಇಂಥ ನಗರವನ್ನು ಅವರು ನೋಡಿಯೇ ಇಲ್ಲವೆಂದು ಅವರು ಉದ್ಗಾರ ತೆಗೆದಿದ್ದಾರೆ. ನೂರು ಸಾವಿರ ಮನೆ, ಅಯ್ದು ಲಕ್ಷ ಪ್ರಜೆಗಳಿದ್ದಂತೆ ವರ್ಣಿಸುತ್ತಾರೆ. ಗಂಗಾದೇವಿಯ ಪ್ರಕಾರ ಅದು ಅಮರಾವತಿಯನ್ನೂ ಮೀರಿಸಿತ್ತು. ಸರೋವರ ಉದ್ಯಾನಗಳಿಂದ ಕೂಡಿ ಅದು ಸಮಸ್ತ ಸುವಸ್ತುಗಳ ಶಾಲೆಯೂ ಸಂಪೂರ್ಣ ಸಂಪತ್ತಿನ ನೆಲೆಯೂ ಆಗಿದ್ದಿತು. ಪಂಪಾಕ್ಷೇತ್ರ, ಅಚ್ಯುತಪುರ, ಅಚ್ಯುತರಾಯಪೇಟೆ, ಸೂಳೇಬಜಾರ್, ತಿರುಮಲಪುರ, ಕೃಷ್ಣರಾಜಪುರ, ನಾಗಲಾಪುರ, ಕಮಲಾಪುರ, ವಿಜಯವಿರೂಪಪುರ – ಅನೇಕನಗರಗಳನ್ನು ಒಳಗೊಂಡಿದ್ದಿತು. ಹೊರಗಡೆ ಅನೇಕ ಇತರ ಸಣ್ಣ ಸಣ್ಣ ಪಟ್ಟಣಗಳು ಸುಪ್ರಸಿದ್ಧವಾಗಿದ್ದವು.

ಕರ್ನಾಟಕದಲ್ಲಿ ಪುರುಷರಂತೆ ಸ್ತ್ರೀಯರೂ ಸುಸಂಸ್ಕೃತರು. ಸಮಾಜದಲ್ಲಿ ಅವರಿಗೆ ಬಹುಮಾನ್ಯವಾದ ಸ್ಥಾನಗಳಿದ್ದುದು ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಸ್ಪಷ್ಟವಾಗಿವೆ. ಆದಿ ಕಾಲದಿಂದಲೂ ಅವರಿಗೆ ಸೂಕ್ತ ಸಂಸ್ಕಾರಗಳು ದೊರೆಯುತ್ತಿದ್ದವು. ಸ್ತ್ರೀ ಶಿಕ್ಷಣ ಬಳಕೆಯಲ್ಲಿದ್ದರೂ ಅದು ವಿಶೇಷ ಬಳಕೆಯಲ್ಲಿದ್ದುದು ಮೇಲ್ತರದ ಮಕ್ಕಳಿಗೆ. ಋಷಭದೇವನು ಬ್ರಾಂಹಿ ಮತ್ತು ಸುಂದರಿಯರೆಂಬ ತನ್ನ ಶಿಷ್ಯೆಯರಿಗೆ ವಿದ್ಯಾಭ್ಯಾಸ ಮಾಡಿಸಿದುದನ್ನು ಪಂಪನು ಹೇಳುತ್ತಾನೆ. ಮೊದಲನೆಯವಳಿಗೆ ಅಕ್ಷರ ವಿದ್ಯೆಯನ್ನೂ ಎರಡನೆಯವಳಿಗೆ ಗಣಿತವನ್ನೂ ಹೇಳಿ ಕೊಟ್ಟನಂತೆ. ಗಂಗರಕಾಲದಿಂದ ವಿಜಯನಗರದ ಕಾಲದವರೆಗೆ ಸಮಾಜದಲ್ಲಿ ಅವರು ಗೌರವ ಸ್ಥಾನವನ್ನು ಪಡೆದಿದ್ದಾರೆ. ಹಲವಾರು ಸ್ತ್ರೀಯರು ಉನ್ನತ ಸ್ಥಾನದಲ್ಲಿದ್ದೂ ಹೊಣೆಗಾರಿಕೆಯಿಂದ ಆಡಳಿತ ನಿರ್ವಹಿಸುತ್ತಿದ್ದರು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಇದರ ಪರಾಕಾಷ್ಠೆಯನ್ನು ನೋಡಬಹುದು. ವಿಜಯಾದಿತ್ಯನ ಮಹಾಮಾತೆ ವಿನಯಾವತಿ ರಾಣಿಯು (೬೯೬–೭೩೩) ವಾತಾಪಿ ಪುರದಲ್ಲಿ ಪ್ರತಿಷ್ಠಿಸಿದ್ದ ದೇವತಾ ವಿಗ್ರಹಗಳಿಗೆ ಅನೇಕ ಕರತೆರಿಗೆಗಳ ಮೂಲಕ ಉತ್ಪನ್ನ ದೊರೆಯುವಂತೆ ಮಾಡಿದಳು. ಅಮೋಘವರ್ಷನ ಮಗಳೂ, ಎರೆಯಂಗನ ಹೆಂಡತಿಯೂ ಆದ ರೇವಕ ನಿಮ್ಮಡಿ ಎಡೆದೊರೆನಾಡನ್ನು ಕ್ರಿ.ಶ. ೮೩೭ ರಲ್ಲಿ ಆಳುತ್ತಿದ್ದಳು. ಚಂದ್ರಾದಿತ್ಯನ ರಾಣಿ ವಿಜಯ ಭಟ್ಟಾರಿಕೆ ತನ್ನ ಪತಿ ರಾಜಧಾನಿಯಲ್ಲಿಲ್ಲದಾಗ ರಾಜ್ಯವಾಳುತ್ತ ತಾನೇ ಸ್ವಂತ ಶಾಸನಗಳನ್ನು ಹಾಕಿಸಿರುವುದೂ ಕಂಡು ಬರುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಸಾಮಾನ್ಯ ಮಹಿಳೆಯರು ಅಧಿಕಾರದಲ್ಲಿ ಇದ್ದ ನಿದರ್ಶನಗಳಿವೆ. ನಾಗರ ಖಂಡದ ನಾಳ್ಗಾವುಂಡನು ತನ್ನ ಪ್ರಭುವಿಗಾಗಿ ಹೋರಾಡಿ ಮರಣ ಹೊಂದಿದಾಗ ಅವನ ಹೆಂಡತಿಯಾದ ಚಿಕ್ಕಮಬ್ಬೆಯು ಉತ್ತರಾಧಿಕಾರಿಣಿಯಾಗಿ ಅಧಿಕಾರಪಡೆದು ಅವನ ಕಾರ್ಯವನ್ನೂ ಸಾಹಸದಿಂದ ಸಾಧಿಸಿದಳು. ಅವಳು ನಿವೃತ್ತಿ ಹೊಂದಲು ಅಪೇಕ್ಷಿಸಿದಾಗ ಅವಳ ಮಗಳನ್ನು ಆ ಕಾರ್ಯಕ್ಕೆ ನೇಮಕ ಮಾಡಿದಳು. ಕಲ್ಯಾಣಿ ಚಾಳುಕ್ಯರಲ್ಲಿ ಅನೇಕ ರಾಜಕುಮಾರಿಯರು ಪ್ರಾಂತಾಧಿಕಾರಿಗಳಾಗಿ ಆಡಳಿತ ನಡೆಸಿದ್ದಾರೆ. ಕಿಸುಕಾಡಿನ ಸತ್ಯಾಶ್ರಯನ ಮಗಳಾದ ಅಕ್ಕಾದೇವಿ ಇದಕ್ಕೆ ಉತ್ತಮನಿದರ್ಶನ. ವಿಷ್ಣುವರ್ಧನನ ಇತರ ಮಹಿಷಿಯರಾದ ರಾಜಲಾ, ಲಕ್ಷ್ಮೀ, ದೇವಕೀ, ಎಂಬುವರೂ ಶಾಂತಲೆಯಂತೆಯೇ ಸಂಗೀತ, ಸಾಹಿತ್ಯ ನಾಟ್ಯ ಮುಂತಾದ ಕಲೆಗಳಲ್ಲಿಯೇ ಅಲ್ಲದೆ ರಾಜ್ಯಭಾರ ಕ್ರಮದಲ್ಲಿಯೂ ಕುಶಲೆಯರಾಗಿದ್ದರು. ವಿಷ್ಣುವರ್ಧನನ ರಾಣಿ ಶಾಂತಲದೇವಿಯು ರಾಜ್ಯಾಡಳಿತದಲ್ಲಿ ಭಾಗವಹಿಸಿ ಪತಿಗೆ ಮಾರ್ಗದರ್ಶಕಳಾಗಿದ್ದಳಂತೆ. ಸಾಮಂತರಾಜ ಬರುಮಯ್ಯನ ಹಿರಿಯಪತ್ನಿ ಬಾಗಿನಬ್ಬೆ ಕ್ರಿ. ಶ. ೧೧೮೯ ರಲ್ಲಿ ಆಳುತ್ತಿದ್ದಳೆಂದು ತಿಳಿದುಬರುತ್ತದೆ. ಧಾರ್ಮಿಕಸಂಸ್ಥೆಗಳ ಆಡಳಿತದಲ್ಲಿಯೂ ಅವಳಿಗೆ ಭಾಗ ಇರುತ್ತಿತ್ತು. ಕ್ರಿ. ಶ. ೧೨೫೫ ರ ಒಂದು ಶಾಸನದಂತೆ ಕುಂಜನ ಶೆಟ್ಟಿಯೆಂಬುವನು ಕುಂಜೇಶ್ವರ ದೇವಾಲಯಕ್ಕೆ ಹೆಚ್ಚಿನ ಭೂಮಿಯ ಕೊಡುಗೆಯನ್ನು ಕೊಟ್ಟಂತೆಯೂ, ಆ ದೇವಾಲಯದ ಮೇಲ್ವಿಚಾರಣೆಯನ್ನು ಅವನ ಮಗಳಾದ ಘನಕುಮಾರಿ ಚೆಂದವ್ವೆಯೇ ನೋಡಿಕೊಳ್ಳುತ್ತಿದ್ದಂತೆ ಹೇಳಿದೆ. ವಾಸ್ತುಶಿಲ್ಪಕ್ಕೆ ಅವರಿಂದ ವಿಶೇಷ ಪ್ರೋತ್ಸಾಹ ದೊರೆತಿದೆ. ಇಮ್ಮಡಿ ವಿಕ್ರಮಾದಿತ್ಯನ ರಾಣಿಯರಾದ ಲೋಕ ಮಹಾದೇವಿ ಮತ್ತು ತ್ರೈಲೋಕ್ಯಮಹಾದೇವಿಯರು ಪಟ್ಟದ ಕಲ್ಲಿನ ಭವ್ಯದೇವಾಲಯಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಶಾತವಾಹನರ ಕಾಲದಲ್ಲಿ ಅನೇಕ ಸ್ತ್ರೀಯರು ಬೌದ್ಧ ಭಿಕ್ಷುಗಳ ಉಪಯೋಗಕ್ಕಾಗಿ ಸ್ತೂಪ, ವಿಹಾರ ಮತ್ತು ಗುಹೆಗಳನ್ನೂ ನಿರ್ಮಿಸಿದ್ದಾರೆ. ಸಾಹಿತ್ಯದಲ್ಲಿಯೂ ಪ್ರಸಿದ್ಧರಾದವರು ಇಲ್ಲದಿಲ್ಲ, ಕಂತಿ, ಅತ್ತಿಮಬ್ಬೆ, ಅಕ್ಕಮಹಾದೇವಿ ನಾಗಲಾಂಬಿಕೆ ಮೊದಲಾದವರನ್ನೂ ಇಲ್ಲಿ ಸೂಚಿಸಬಹುದು. ಸಂಗೀತ, ನಾಟ್ಯ ಮೊದಲಾದ ಕ್ಷೇತ್ರಗಳಲ್ಲಿ ಪ್ರಸಿದ್ಧರಾದವರನೇಕರಿದ್ದಾರೆ. ವಿಷ್ಣುವರ್ಧನನ ರಾಣಿ ಶಾಂತಲಾದೇವಿ ಭರತಾಗಮದಲ್ಲಿ ಒಂದು ರತ್ನಜ್ಯೋತಿ, ಎಲ್ಲ ವಿಧದ

ಡಾ॥ ಎನ್. ಅನಂತರಂಗಾಚಾರ್

ನೃತ್ಯದಲ್ಲಿಯೂ ಹಸ್ತ ಮುದ್ರಿಕೆಗಳಲ್ಲಿಯೂ ಅವಳು ಸುಪ್ರಸಿದ್ಧಳು. ಇವಳಿಗೆ 'ಸಂಗೀತ ಸರಸ್ವತಿ' ಎಂಬ ಬಿರುದಿತ್ತು. ಒಂದನೆಯ ಬಲ್ಲಾಳನ ದಂಡನಾಯಕನಾಗಿದ್ದ ಮರಿಯಾನೆಯು ಸಕಲ ಕಲೆಗಳಲ್ಲಿಯೂ ಪರಿಣತರಾದ ತನ್ನ ಮೂವರು ಮಕ್ಕಳನ್ನೂ ಬಲ್ಲಾಳನಿಗೆ ಮದುವೆ ಮಾಡಿಕೊಟ್ಟನು. ಗಂಗರಾಜ ಪೆರ್ಮಾಡಿ ನರ್ತನದಲ್ಲಿ ಪ್ರವೀಣಳಾದ ಬಲಚಿ ದೇವಿಯನ್ನು ಮದುವೆಯಾದನು. 'ಪಾತ್ರಜಗದಲೆ' ಎಂಬ ಬಿರುದನ್ನು ಅವಳು ಪಡೆದಿದ್ದಳಂತೆ. ಕಲಚೂರ್ಯ ಸೋಮೇಶ್ವರನ ರಾಣಿ ಸೋಮಲದೇವಿ ಮಹಾಸಭಿಕರೆದುರಿಗೆ ನರ್ತನಮಾಡುತ್ತಿದ್ದಳೆಂದು ಶಾಸನಗಳಲ್ಲಿ ಉಕ್ತವಾಗಿದೆ. ತ್ರಿಭುವನ ಮಲ್ಲದೇವ ಚೋಳನ ಮಹಾರಾಣಿ ಲಕ್ಷ್ಮೀದೇವಿಯು ತನ್ನ ಪತಿಯೊಡನೆ ಪಾಲುದಾರಳಾಗಿ ರಾಜ್ಯವಾಳಿದಳು. ಅವಳು ಕಲೆ ಸಾಹಿತ್ಯ, ಗಾನ, ವಾದ್ಯ, ಸಂಗೀತ ನೃತ್ಯ ಶಾಸ್ತ್ರದಲ್ಲಿ ಪ್ರವೀಣಳಾಗಿದ್ದಳು. ದೇವಸ್ಥಾನದಲ್ಲಿ ನಡೆಯುವ ಸೇವೆಗಳಲ್ಲಿ ಸಂಗೀತ ಮತ್ತು ನಾಟಕಾಭಿನಯಗಳು ತಪ್ಪದೇ ಗೋಚರಿಸುತ್ತವೆ. ಈ ಕಲೆಗಾರರಲ್ಲಿ ಬಹುಮಂದಿ ಮಹಿಳೆಯರು. ಜಲಸಂಗವಿ ಶಾಸನವು ಒಬ್ಬ ಮಹಿಳೆಯಿಂದ ಕೆತ್ತಲ್ಪಟ್ಟದ್ದು. ಆ ಶಾಸನದಲ್ಲಿ ಅವಳು ವಾಸ್ತವವಾಗಿ ಬರೆಯುತ್ತಿರುವಂತೆ ತೋರಿಲಾಗಿದೆ. ಸುಂದರವಾದ ಲಿಪಿ ಮತ್ತು ಅದನ್ನು ಕಂಡರಿಸುವ ಕಲೆಗಳಲ್ಲಿ ಮಹಿಳೆಯರು ಪರಿಣತರಾಗಿದ್ದರೆಂದು ಇದರಿಂದ ಊಹಿಸಬಹುದಾಗಿದೆ. ವಿಜಯನಗರದಕಾಲದಲ್ಲಿ ಮಹಿಳೆಯರ ಸ್ಥಾನಮಾನವನ್ನು ವಿದೇಶೀಯನಾದ ಬಾರ್ಬೋಸಾ ಹೀಗೆಂದು ವರ್ಣಿಸಿದ್ದಾನೆ. 'ಕುಟುಂಬ ನಿರ್ವಹಣೆ ಸ್ತ್ರೀಯರ ಪ್ರಧಾನ ಕ್ಷೇತ್ರವಾಗಿದ್ದರೂ ಅವರು ಇತರ ಕ್ಷೇತ್ರಗಳಲ್ಲಿಯೂ ಭಾಗವಹಿಸುತ್ತಿದ್ದರು. ಬಾಲ್ಯಕಾಲದಿಂದಲೂ ಸ್ತ್ರೀಯರು ಗೀತ, ವಾದನ ಮತ್ತು ನೃತ್ಯಗಳನ್ನು ಅಭ್ಯಾಸಮಾಡುತ್ತಾರೆ. ರಾಜಪತ್ನಿಯರು ಸಂಗೀತದಲ್ಲಿ ಪ್ರವೀಣರು. ಅರಮನೆಯಲ್ಲಿ ಸ್ತ್ರೀಯರು ಪುರುಷರ ಎಲ್ಲ ಕಾರ್ಯವನ್ನೂ ನಿರ್ವಹಿಸುತ್ತಾರೆ. ಕತ್ತಿ ಗುರಾಣಿಗಳನ್ನು ಹಿಡಿದು ಕಾದಬಲ್ಲರು. ಮಲ್ಲಯುದ್ಧವನ್ನು ಮಾಡಬಲ್ಲರು. ಲೆಕ್ಕ ಪತ್ರವನ್ನು ಇಡಬಲ್ಲರು. ಪಾಯಿಸ್ ಮತ್ತು ನ್ಯೂನಿಜ್ ಎಂಬುವರ ಪ್ರಕಾರ ಅವರು ಹೊರಗಿನ ವ್ಯವಹಾರಗಳನ್ನು ಮಾಡಬಲ್ಲರು. ಪ್ರೌಢದೇವರಾಯನ ಆಸ್ಥಾನದಲ್ಲಿ ಹೊನ್ನಲೆ ಯೆಂಬುವಳು ವರದಿಗಾರಳು. ಅಚ್ಯುತರಾಯನ ಕಾಲದಲ್ಲಿ ಕವಯಿತ್ರಿಯಾದ ತಿರುಮಲಾಂಬ ರಾಜ್ಯ ಕಾರ್ಯನಿರ್ವಹಣೆ ಮಾಡಿದಳು. ತನಗೆ ಮೆಚ್ಚು ಕೊಟ್ಟಾಗ ಸ್ವಯಂ ರಚಿಸಿದ ಪದ್ಯಗಳನ್ನು ವಾಚಿಸಿದಳು. ಕನಕದಾಸರು ಆಗಿನಕಾಲದ ಸ್ತ್ರೀಯರು ಅಂಗಡಿಗಳಿಗೆ ಭೂಷಣವಾಗಿ ವಾಣಿಜ್ಯ ಕ್ಷೇತ್ರಗಳಲ್ಲಿಯೂ ಭಾಗವಹಿಸುತ್ತಿದ್ದರೆಂದು ತಿಳಿಸಿದ್ದಾರೆ. ಅವರ ಬಿಚ್ಚಿದ ಜಡೆ ಮುಡಿಯನ್ನು ಬೆವರಿದ ಮುಖವನ್ನು ಏರಿಳಿಯುತ್ತಿದ್ದ ವಕ್ಷವನ್ನು ವರ್ಣಸುತ್ತಾರೆ. ಪುರಂದರರು ಬೂಟಾಟಿಕೆಯವರನ್ನು ನಾಟಕದ ಸ್ತ್ರೀಯರಿಗೆ ಹೋಲಿಸುತ್ತಾರೆ. ಸ್ತ್ರೀಯರು ನಾಟಕದಲ್ಲಿ ಪುರುಷ ವೇಷವನ್ನು ಧರಿಸುತ್ತಿದ್ದರು. ತಿಮ್ಮಯ್ಯನೆಂಬ ನಟನ ಮಗಳಾದ ಪಾತ್ರಿಯೆಂಬುವಳು 'ತಾಯಿಕೊಂಡ' ನಾಟಕದಲ್ಲಿ ಪಾತ್ರ ವಹಿಸಿದ್ದಳು.

ವೇಶ್ಯಾ ಸ್ತ್ರೀಯರಿಗೆ ಸಮಾಜದಲ್ಲಿ ವಿಶೇಷ ಗೌರವಸ್ಥಾನವಿದ್ದಿತು. ವೇಶ್ಯಾವೃತ್ತಿಯು ಎಲ್ಲೆಡೆಯಲ್ಲಿಯೂ ವಿಶೇಷ ಬಳಕೆಯಲ್ಲಿತ್ತು. ಅವರು ರೂಪು, ಲಾವಣ್ಯ, ಬುದ್ಧಿ, ಕೌಶಲ, ಕಲಾಸಕ್ತಿಗಳಿಗೆ ಪ್ರಖ್ಯಾತರಾಗಿದ್ದರು. ಶ್ರೀಮಂತಿಕೆ ವಿಲಾಸ ವೈಭವಗಳಿಂದ ಕೂಡಿದ್ದರು. ವಿನಾಪೋಟಿ ಎಂಬ ಹೆಸರಿನ ಸೂಳೆ ವಿನಯಾದಿತ್ಯನ ಪ್ರಾಣವಲ್ಲಭೆಯಾಗಿದ್ದಳು. ಇವಳು ಮಹಾಕೂಟ ದೇವಾಲಯಕ್ಕೆ ಒಂದು ಸುವರ್ಣಪೀಠ, ರಜತಚ್ಛತ್ರ ಮತ್ತು ೮೦೦ ಮತ್ತರುಭೂಮಿಯನ್ನು ದಾನ ಮಾಡುವಷ್ಟು ಶ್ರೀಮಂತಳಾಗಿದ್ದಳು. ಗೋವಿಂದ ಪೊಡ್ಡಿಯ ಮಗಳಾದ ಬದಿಪೊಡ್ಡಿಯೆಂಬುವಳು ಒಂದು ದೇವಾಲಯದ ಪ್ರಧಾನ ವೇಶ್ಯೆಯಾಗಿದ್ದಳು. ದೇವಾಲಯಕ್ಕೆ ಗಜಾಶ್ವರಥ ಭೂದಾನ ಗೋದಾನಗಳನ್ನು ಮಾಡಿದಳು. ಜಾಲಬ್ಬೆ ಎಂಬ ಮತ್ತೊಬ್ಬಳು ವಿಜಯೇಶ್ವರ ದೇವರಿಗೆ ಹರಕೆ ಒಪ್ಪಿಸಲೆಂದು ಸ್ತಂಭಗಳನ್ನು ಮಾಡಿಸಿದಳು. ವಿನಾಪೋಟಿಯ ತಾಯಿ ಮತ್ತು ಅಜ್ಜಿಯರ ಹೆಸರುಗಳು ಬಹು ಗೌರವಯುತವಾಗಿ ಉಕ್ತವಾಗಿವೆ. ಶಾಸಗಳಲ್ಲಿ ಇವರು ಮೂವರಿಗೂ ಗೌರವ ಸೂಚಕ ವಿಶೇಷಣಗಳು ಬಹು ವಚನದಲ್ಲಿ ಸೂಚಿತವಾಗಿವೆ. ಸೇಂದ್ರಕರಾಜನೆಂಬುವನು ರೂಪದಲ್ಲಿ ಮನ್ಮಥನಾಗಿದ್ದು ವೇಶ್ಯೆಯರ ಕಣ್ಮಣಿಯಾಗಿದ್ದನಂತೆ. ಒಟ್ಟಿನಲ್ಲಿ ಇವರು ವಿವಿಧ ಕಲೆಗಳ ಪೋಷಕರಾಗಿ ಸಮಾಜದಲ್ಲಿ ಬಹಳ ಆದರಣೀಯರಾಗಿದ್ದರು. ಸಾಮಾನ್ಯವಾಗಿ ಎಲ್ಲ ಕನ್ನಡ ಮಹಾಕಾವ್ಯಗಳಲ್ಲಿಯೂ ವೇಶ್ಯಾವಾಟಿಯ ವರ್ಣನೆಯು ಒಂದು ಪ್ರಧಾನ ಅಂಗವಾಗಿ ಅಂಗೀಕೃತವಾಗಿರುವುದು ಸಮಾಜದಲ್ಲಿ ಅವರ ಪ್ರಾಮುಖ್ಯವನ್ನು ಸ್ಪಷ್ಟಪಡಿಸುತ್ತದೆ. 'ಸಮಸ್ತ ಭಾರತ'ವನ್ನು ಬರೆಯಲು ಹೊರಟ ಕವಿತಾಗುಣಾರ್ಣವನಾದ ಪಂಪನು ಆಕಾಲದ ವೇಶ್ಯಾವಾಟಿಯ ಒಂದು ಪ್ರತ್ಯಕ್ಷ ಚಿತ್ರವನ್ನು ಕೊಟ್ಟಿದ್ದಾನೆ. ಆ ಪೆಂಡವಾಸಗೇರಿಯ ಭೋಗಸೌಭಾಗ್ಯ, ಮಾಲೆಗಾರ್ತಿಯರ ಜೋಡುಗೆಯ್ತು, ಪಾದರಿಯರ ಸಂಭಾಷಣೆಯ ವೈಭವ, ಕುಹಕ ಕೇಳಿಗಳು, ಸರಸಸಲ್ಲಾಪಗಳು, ನೋವುನುಲಿತಗಳು, ಆರ ಬೊಜಂಗ, ಕಿರುಕುಗಳ ಬೊಜಂಗ, ಪೊರ್ಕುಳಿ ಬೊಜಂಗ, ಪ್ರೋಜಲ ಬೊಜಂಗ ಕತ್ತುರಿ ಬೆಣಜಂಗರೇ ಮೊದಲಾದ ವಿವಿಧ ರೀತಿಯ ಬೊಜಂಗರ ಚಿತ್ರಗಳು ಆಕಾಲದ ವೇಶ್ಯಾವರ್ಗದವರಿಗಿದ್ದ ಸ್ಥಾನವನ್ನು ವಿಶದಪಡಿಸುತ್ತದೆ. ದೇವಾಲಯಾದಿ ಧಾರ್ಮಿಕ ಕ್ಷೇತ್ರಗಳಲ್ಲಿಯೂ ರಾಜಾಸ್ಥಾನಾದಿ ವೈಭವ ಪರಿಸರಗಳಲ್ಲಿಯೂ ಅವರ ಸ್ಥಾನ ಅನಿವಾರ್ಯವಾಗಿತ್ತೆಂದೇ ಹೇಳಬಹುದು.

ಕುಡಿತವೂ ಸಮಾಜದಲ್ಲಿ ವಿಶೇಷವಾಗಿ ಬಳಕೆಯಲ್ಲಿತ್ತು. ಪುಲಿಕೇಶಿಯ ರಾಜ್ಯದಲ್ಲಿ ಕ್ಷತ್ರಿಯ ಯೋಧರು ಕುಡಿದು ಮತ್ತರಾಗುತ್ತಿದ್ದರು. ಯುದ್ಧಕ್ಕೆ ಹೋಗುವುದಕ್ಕೆ ಮೊದಲು ಯುದ್ಧದಾನೆಗಳಿಗೂ ಕುಡಿಸಿ ಉನ್ಮತ್ತಗೊಳಿಸುತ್ತಿದ್ದರು. ತತ್ಕಾಲೀನ ಗ್ರಂಥವಾದ ಪುಲಸ್ತ್ಯಸ್ಮೃತಿಯಲ್ಲಿ ಅಮಲೇರಿಸುವ ೧೧ ವಿಧವಾದ ಪಾನೀಯಗಳನ್ನು ೧೨ನೆಯದಾದ ಸುರೆಯೊಂದಿಗೆ ಸೇರಿಸಿ ಹೇಳಿದೆ. ಬೇರೆ ಬೇರೆ ವರ್ಗದವರಿಗೆ ಮೆಚ್ಚಿಗೆಯಾದ ಪಾನೀಯಗಳನ್ನು ಹ್ಯುಯುಂತ್ಸಾಂಗನು ಈ ರೀತಿ ವಿವರಿಸಿದ್ದಾನೆ. ದ್ರಾಕ್ಷಿ ಮತ್ತು ಕಬ್ಬುಗಳಿಂದ ತಯಾರಾದ ಮದ್ಯ ಪ್ರಕಾರಗಳು ಕ್ಷತ್ರಿಯರ ಪಾನೀಯಗಳು. ವೈಶ್ಯರು ಅತ್ಯುಗ್ರವಾದ ಬಟ್ಟಿಯ ಸೆರೆಯನ್ನೂ ಕುಡಿಯುತ್ತಾರೆ. ಬೌದ್ಧ ಭಿಕ್ಷುಗಳು, ಮತ್ತು ಬ್ರಾಹ್ಮಣರು ದ್ರಾಕ್ಷಾರಸವನ್ನು ಹಾಲನ್ನೂ ಸೇರಿಸುತ್ತಾರೆ. ಕೆಳಜಾತಿಯವರೂ ಮಿಶ್ರಜಾತೀಯರೂ ಕುಡಿಯುವ ಪಾನೀಯಗಳು ಇಂತಹುದೇ ಆಗಿರಬೇಕಾದುದಿಲ್ಲ. ಪಂಪನು ವರ್ಣಿಸಿರುವ ಪಾನಶಾಲೆಯ ವಿವರವು, ಬಹು ವೈಭವಯುಕ್ತವಾಗಿ ಸಮಾಜದಲ್ಲಿ ಅದರ ಸ್ಥಾನವನ್ನು ನಿರ್ದೇಶಿಸುತ್ತದೆ, ಪಾನ ಶಾಲೆಯಲ್ಲಿ 'ಕಳ್ಳಿನೊಳಮರ್ದಿನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರುಮೊಳ್ಪೆಂಡಿರೊಂದೆಡೆಯೊಳಿರ್ದು ಕಾಮದೇವನೆಂಬ ಬಳಮದುರ್ಕಾಜನ ಮಾಡಿದ ಮರ್ದಿನಂತೆ ಬೆಳೆದು ದಳಂಬಡೆದು ಮೂನೂರರುವತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳ ನರ್ಚಿಸಿ ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಬೆಯುಂಬೆಯ ಕುಂತಳಿಕೆಯ ಮಾಳ್ಕೆಯ ನಿಪ್ಪುಗಳೊಳ್ ತೀವಿ ಮಧುಮಂತ್ರಂಗಳಿಂ ಮಂತ್ರಿಸಿ ನೆಲದೊಳೆರೆದು ತಲೆಯೊಳ್ ತಳಿದು ಕಳ್ಳನೊಳ್ ಬೊಟ್ಟನಿಟ್ಟುಕೊಂಡು ಕಲದಿರ್ಗೆಲ್ಲಂ ಬೊಟ್ಟಿಟ್ಟು—ಹೀಗೇ – ಮುಂದುವರೆಯುತ್ತದೆ.

ಬೇಟೆಯಾಡುವುದು ಅರಸರಿಗೆ ಬಹುಪ್ರಿಯವಾದ ಕ್ರೀಡೆ. ಬ್ರಿಟಿಷ್ ವಸ್ತು ಸಂಗ್ರಹಾಲಯದಲ್ಲಿರುವ ಶಾಸನಗಳಲ್ಲಿ ಒಂದಾದ ಮೂರನೆಯ ಗೋವಿಂದನ ಶಾಸನವೊಂದರಲ್ಲಿ ಬೇಟೆಯ ವಿವರ ಪ್ರಸ್ತಾಪಿತವಾಗಿದೆ. ಬೇಟೆಗಾಗಿ ಪ್ರತ್ಯೇಕ ಕಾಡು

ಗಳು ಮೀಸಲಾಗಿರುತ್ತಿದ್ದವು. ಅಲ್ಲಿ ವಿವಿಧರೀತಿಯ ಪ್ರಾಣಿಗಳನ್ನು ಸಂರಕ್ಷಿಸಲು ತಕ್ಕ ಏರ್ಪಾಟುಗಳಿರುತ್ತಿದ್ದುವು. ರಾಜರಿಗೆ ಬೇಟೆಯಲ್ಲಿ ಸಹಾಯ ಮಾಡುವ ಬೇಟೆಗಾರರು ಅದರ ವಿವರಗಳಲ್ಲೆಲ್ಲಾ ಪ್ರವೀಣರಾಗಿರುತ್ತಿದ್ದರು. ಪಂಪನ ಬೇಟೆಗಾರರು ಪೆರ್ವೇಂಟೆ, ಕಿರುವೇಂಟೆ, ದೀಪದ ಬೇಂಟೆ, ಪಾದಿವೇಂಟೆ ಮೊದಲಾದುವುಗಳ ವೈವಿಧ್ಯವನ್ನೂ ಬೇಂಟೆಯನಾಯ್, ಬೇಂಟೆವಸದನಂ, ಬೇಂಟೆಯ ಲಕ್ಷಣಗಳನ್ನು ಬೇಂಟೆಯ ಬಿಸಡ, ಬೇಂಟೆಯ ತಂತ್ರ, ಮತ್ತು ಪ್ರಯೋಜನಗಳನ್ನು ಚೆನ್ನಾಗಿ ಅರಿತವರಾಗಿದ್ದರು. ರಾಘವಾಂಕನು ವಿವಿಧ ಬೇಟೆಯ ಸ್ವರೂಪವನ್ನೂ ತಂತ್ರವನ್ನೂ ತಿಳಿಯಪಡಿಸಿದ್ದಾನೆ. ಮಹಾಕಾವ್ಯದ ಹದಿನೆಂಟಂಗಗಳಲ್ಲಿ ಮೃಗಯಾ ವಿನೋದವು ಒಂದು ಅವಿಭಾಜ್ಯವಾದ ಅಂಗವಾಗಿ ಪರಿಗಣಿತವಾಗಿರುವುದು ಸಮಾಜದಲ್ಲಿ ಅದಕ್ಕಿರುವ ಸ್ಥಾನವನ್ನು ನಿರ್ದೇಶಿಸುತ್ತದೆ. ಇತರ ಕ್ರೀಡೆಗಳಲ್ಲಿ ಚೆಂಡಾಳ (ಕುದುರೆಯ ಸಹಾಯದಿಂದಾಡುವುದೂ ಸಹ) ರಾಸಕ್ರೀಡೆ, ಜಲಕ್ರೀಡೆ, ಮಲ್ಲಯುದ್ಧಗಳನ್ನು ಹೆಸರಿಸಬಹುದು.

ಮೃತರಾದ ವೀರರು, ಮಹಾಪುರುಷರು, ಗುರುಗಳು-ಸತಿಯರು-ಇವರುಗಳ ನೆನಪಿಗೆ ಸ್ಮಾರಕಗಳನ್ನು ಸ್ಥಾಪಿಸುವುದು ಕರ್ಣಾಟಕದ ಒಂದು ಪ್ರಧಾನ ಪದ್ಧತಿ. ವೀರಗಲ್ಲು ಮತ್ತು ಮಾಸ್ತಿಕಲ್ಲು ಇವುಗಳಲ್ಲಿ ಪ್ರಧಾನವಾದುವು. ಇವುಗಳಲ್ಲಿ ಕಪ್ಪೆ ಅರಭಟ್ಟನ ವೀರಗಲ್ಲು ಪ್ರಥಮವಾದುದು. ಇವುಗಳ ವಿಷಯವನ್ನು ಶಾಸನ ವಿಷಯಕವಾದ ಭಾಗದಲ್ಲಿ ವಿಶದ ಪಡಿಸಿದೆ. ಆತ್ಮಾರ್ಪಣೆಯು ಕೂಡ ರೂಢಿಯಲ್ಲಿದ್ದಿತು. ಕ್ರಿ.ಶ. ೯೦೦ ರ ಕೊಟ್ಟೂರು ಶಾಸನವು ಶೈವಗುರು ಶಂಭುವಿನ ಮರಣವನ್ನು ವರ್ಣಿಸಿದೆ. ಸೋಮೇಶ್ವರ ಚಕ್ರವರ್ತಿಯ ಧಾರವಾಡಜಿಲ್ಲೆಯ ಕುರುವತ್ತಿ ಗ್ರಾಮದ ಶಾಸನದಲ್ಲಿ ತುಂಗಭದ್ರಾನದಿಯಲ್ಲಿ ಶಾಸ್ತ್ರೋಕ್ತವಾಗಿ ಮುಳುಗಿ ಪ್ರಾಣ ಪರಿಸಮಾಪ್ತಿ ಮಾಡಿಕೊಂಡ ಮಹಾಯೋಗಿಯ ವಿಷಯ ಉಕ್ತವಾಗಿವೆ. (E.C. VII. S.K. 136) ಆಮರಣಾಂತ ಉಪವಾಸಮಾಡಿ ಸಲ್ಲೇಖನ ವ್ರತವನ್ನು ಆಚರಿಸಿದವರನೇಕರು. ಗಂಗರಾಜನಾದ ಮಾರಸಿಂಹನು ಬಂಕಾಪುರದಲ್ಲಿ ತನ್ನ ಗುರು ಅಜಿತಸೇನರ ಸನ್ನಿಧಿಯಲ್ಲಿ ಈ ವ್ರತವನ್ನೂ ಕೈಕೊಂಡು ಮಡಿದನು. ಶೂಲಬ್ರಹ್ಮ ಮತ್ತು ವೇಳವಾಳ್ಯ ವ್ರತಗಳನ್ನು ಜನರು ಸರ್ವೇ ಸಾಧಾರಣವಾಗಿ ಆಚರಿಸುತ್ತಿದ್ದರು. ಶಿವಮೊಗ್ಗ ಜಿಲ್ಲೆಯ ಕ್ರಿ. ಶ. ೧೦೬೦ ಶಾಸನದಲ್ಲಿ ಎತ್ತರವಾದ ಸ್ಥಳದಿಂದ ಸೂಲದ ಮೊನೆಯ ಮೇಲೆ ಬಿದ್ದು ಮರಣ ಹೊಂದುವ (ಶೂಲಬ್ರಹ್ಮ) ವಿಷಯ ಉಲ್ಲೇಖವಾಗಿದೆ. ಕ್ರಿ. ಶ. ೧೧೩೦ ರ ಮತ್ತೊಂದು ಶಾಸನದಲ್ಲಿ ವೇಳವಾಳ್ಯ ವ್ರತದ ಪ್ರಸ್ತಾಪವಿದೆ. ಕದಂಬ ರಾಜನಾದ ತೈಲಪನೊಡನೆ ಸ್ವರ್ಗಕ್ಕೆ ಹೋಗಲು ಬೊಪ್ಪಣನು ಈ ವ್ರತವನ್ನು ಸ್ವೀಕರಿಸಿದನು. ನಾಲ್ಮಡಿ ವೀರ ಸೋಮೇಶ್ವರನ ರಾಣಿ ಲಚ್ಚಲದೇವಿಯ ವೇಳೆಕಾರನಾದ ಬೋಕನು ಆಕೆಯೊಡನೆ ಮರಣಹೊಂದುವ ಪ್ರತಿಜ್ಞೆ ತೊಟ್ಟು ಕ್ರಿ.ಶ. ೧೧೮೫ ರಲ್ಲಿ ರಾಜನ ಆಳ್ವಿಕೆಯ ೫ನೆಯ ವರ್ಷದಲ್ಲಿ ಮೃತಿ ಹೊಂದಿದನು. ಪತಿಯೊಡನೆ ಸತಿಯು ಸಹಗಮನ ಮಾಡುವ ಪದ್ಧತಿಯು ಕರ್ಣಾಟಕದಲ್ಲಿ ಆದಿಕಾಲದಿಂದ ರೂಢಿಯಲ್ಲಿದೆ. ಒಂದನೆಯ ರಾಚಮಲ್ಲನ ಮಂತ್ರಿ ಬೇಚರಾಜನ ಇಬ್ಬರು ಪತ್ನಿಯರಾದ ಬೈಲಿಯಕ್ಕ ಮತ್ತು ಮಲಿಪನಿಯಕ್ಕ ಎಂಬುವರು ಪತಿಯ ಶವದೊಡನೆ ಚಿತೆಯೇರಿದರು. (E.C IV 273) ಬೆಳತೂರಿನ ಕನ್ನಡ ಶಾಸನದಲ್ಲಿ ದೇಕಬ್ಬೆಯ ಸಹಗಮನ ಉಲ್ಲೇಖಿತವಾಗಿದೆ. ರವಿವರ್ಮನ ಹೆಂಡತಿ ಪತಿಯ ಮರಣಾನಂತರ ಚಿತೆಯಲ್ಲಿ ಸಹಗಮನ ಗೈದು ಮಹಾಸತಿಯೆನಿಸಿಕೊಂಡಳು. ಈ ಪದ್ಧತಿಯು ವಿಜಯನಗರ ಕಾಲದವರೆಗೂ ರೂಢಿಯಲ್ಲಿದ್ದುದನ್ನು ವಿದೇಶೀ ಯಾತ್ರಿಕರು ಸ್ಪಷ್ಟವಾಗಿ ನಿರ್ದೇಶಿಸಿ ತಮ್ಮ ಅಸಮಾಧಾನವನ್ನು ಸೂಚಿಸಿದ್ದಾರೆ.

ಪ್ರಜೆಗಳು ದೊರೆಗಳಿಗಾಗಿ ಹಲವಾರು ಬಗೆಯಲ್ಲಿ ಸ್ವಾಮಿ ನಿಷ್ಠೆಯನ್ನು ವ್ಯಕ್ತಪಡಿಸುತ್ತಿದ್ದರು. ವಾಗ್ದಾನವನ್ನು ಪೂರ್ತಿಗೊಳಿಸುವುದು, ದೊರೆಗಾಗಿ ಪ್ರಾಣಾರ್ಪಣೆಮಾಡುವುದು, ತನ್ನ ಆಸ್ತಿಯನ್ನೆಲ್ಲ ಅವನಿಗೆ ಮುಡಿಪಾಗಿಡುವುದು–ಇವು ಆ ನಿಷ್ಠೆಯ ಬಾಹ್ಯಸ್ವರೂಪ. ವೀರಬಲ್ಲಾಳನ ದಾನ ಮತ್ತು ವಿಜಯಾಭ್ಯುದಯಕ್ಕಾಗಿಯೇ ಕುವರ–ಲಕ್ಷ್ಮನು ತನ್ನ ಐಶ್ವರ್ಯವನ್ನೂ ಜೀವನವನ್ನೂ ಮುಡಿಪಾಗಿಟ್ಟನು. ಬೇಲೂರಿನ ೧೨೨೦ರ ಶಾಸನದಲ್ಲಿ ಬಲ್ಲಾಳದೊರೆ ಇವನನ್ನು ಮಗನಂತೆ ಸಾಕಿದನೆಂದೂ ಇವನೂ ಅವನ ನಚ್ಚಿನ ಬಂಟನಂತೆ ನಡೆದುಕೊಂಡನೆಂದೂ ಉಕ್ತವಾಗಿದೆ. ಮಹಾವಿಷ್ಣುವಿಗೆ ಭೃತ್ಯನಾದ ಗರುಡನಂತೆ ವಿಷ್ಣುವರ್ಧನನಿಗೂ ಗರುಡರೆಂಬ ಅಂಗರಕ್ಷಕರಿದ್ದರು. ಬೊಕ್ಕಿಮಯ್ಯಾ ಬೊಕ್ಕ ಜಾನಿಮಯ್ಯಾ ಮುಂತಾದವರು ಬಿಟ್ಟಿಗನ ಗರುಡರಾಗಿ ಅವನೊಡನೆ ಆಸುನೀಗಿದರು.

ಸಾಮಾನ್ಯ ಜನರ ವಿಷಯ ಶಾಸನಗಳಿಂದ ವಿಶೇಷ ತಿಳಿಯದಿದ್ದರೂ ಅವರು ಸತ್ಯಸಂಧರು, ಸತ್ಯಶೀಲರು, ಧರ್ಮನಿಷ್ಠರು, ಪರಾಕ್ರಮಶಾಲಿಗಳು ಮತ್ತು ದೃಢಸಂಕಲ್ಪರು ಎಂದು ಭಾವಿಸಲು ಸಾಕಷ್ಟು ಆಧಾರಗಳು ಸಿಕ್ಕುತ್ತವೆ. ಹಾಗೆಯೇ ಅವರು ಉತ್ಸಾಹಿಗಳು, ಉಪಕಾರಿಗಳಿಗೆ ಪ್ರತ್ಯುಪಕಾರಮಾಡುವವರು, ಅನ್ಯಾಯಕ್ಕೆ ಪ್ರತಿಯಾಗಿ ಸೇಡು ತೀರಿಸಿಕೊಳ್ಳುವ ಮನೋಭಾವ ವುಳ್ಳವರು. ಅವರು 'ಸಾಧೂಗೆ ಸಾಧು ಮಾಧುರ್ಯಂಗೆ ಮಾಧುರ್ಯಂ, ಬಾಧಿಪ್ಪಕಲಿಗೆ ಕಲಿಯುಗ ವಿಪರೀತನ್' ಆಗಿದ್ದರು. ಅವರ ಉಡುಗೆ ತೊಡಗೆಗಳು ಬಹಳ ಸರಳವಾಗಿರುತ್ತಿದ್ದವು. ವಿದೇಶಿಯ ಯಾತ್ರಿಕರ ಅಭಿಪ್ರಾಯದಂತೆ ಬ್ರಾಹ್ಮಣರು ಶುದ್ಧ ಸರಳ ಮತ್ತು ಮಿತ ವ್ಯಯದ ಜೀವನ ಮತ್ತು ಉಡುಪನ್ನುಳ್ಳವರು. ರಾಜರ ಮತ್ತು ಶ್ರೀಮಂತರ ವೇಷ ಭೂಷಣಗಳು ಅಸಾಮಾನ್ಯ. ಬೆಲೆಯುಳ್ಳ ಮುತ್ತು ಹವಳಗಳಿಂದ ಕೂಡಿದ ಕುಚ್ಚುಗಳಿಂದ ಅಲಂಕೃತವಾದ ರತ್ನಖಚಿತ ಮಕುಟಗಳು ಅವರ ಶಿರೋಭೂಷಣವಾಗಿರುತ್ತಿತ್ತು. ಮೈಕೈಗಳನ್ನು ಕಡಗ, ಕಂಕಣ, ತೋಳ್ಬಂದಿ, ಉಂಗುರ, ರತ್ನಹಾರ ಮುಂತಾದುವು ಅಲಂಕರಿಸಿದ್ದವು. ಜನಸಾಮಾನ್ಯರ ಒಳ ಮತ್ತು ಹೊರ ಉಡುಪುಗಳು ಹೊಲಿಗೆಯನ್ನು ಕಾಣದ ವಸ್ತ್ರಗಳು. ಶುಭ್ರ ವರ್ಣದವುಗಳಿಗೆ ಮೆಚ್ಚಿಗೆ ಹೆಚ್ಚು. ಗಂಡಸರು ಒಂದು ತುಂಡು ವಸ್ತ್ರವನ್ನು ಸೊಂಟಕ್ಕೆ ಭುಜಗಳವರೆಗೆ ಸುತ್ತಿಕೊಂಡು ಬಲತೋಳನ್ನು ಬಿಟ್ಟುಕೊಂಡಿರುವರು. ಹೆಂಗುಸರು ಬಲು ಉದ್ದವಾದುವನ್ನು ಎರಡು ತೋಳುಗಳ ಮೇಲೂ ತುಂಬ ಹೊದೆದುಕೊಂಡು ಅದು ಕೆಳಗೆ ಸಡಿಲವಾಗಿ ಜೋಲಾಡುವಂತೆ ಮೈತುಂಬ ಮುಚ್ಚಿಕೊಳ್ಳುವರು. ನಡುತಲೆಯ ಕೂದಲನ್ನು ಸುರುಳಿ ಸುರುಳಿಯಾಗಿ ಸುತ್ತಿಕೊಂಡು ಉಳಿದ ಕೂದಲನ್ನು ಜೋಲಾಡುವಂತೆ ಬಿಟ್ಟುಕೊಳ್ಳುವರು. ಇತ್ಸಿಂಗನ ಪ್ರಕಾರ ಉಚ್ಚವರ್ಗದವರು ಒಂದು ಜೊತೆ ಮೆತ್ತನೆಯ ವಸ್ತ್ರಗಳನ್ನು ಧರಿಸುವರು. ಬಡವರು ಒಂಟಿ ವಸ್ತ್ರವನ್ನು ಧರಿಸುವರು. ಆಕಾಲದಲ್ಲಿ ಸ್ತ್ರೀಪುರುಷರು ಧರಿಸುತ್ತಿದ್ದ ನಾನಾ ತೆರನಾದ ಕರ್ಣಕುಂಡಲ, ಕೊರಳಿನ ಹಾರ, ತೋಳ ಬಂದಿ, ಕಡಗ ಕಂಕಣ, ಒಡ್ಯಾಣ ಉಂಗುರ, ವಿಧವಿಧವಾದ ಹೆಳಲು, ತುರುಬು, ನಡುಪಟ್ಟಿಗಳು ಆಕಾಲದ ವಾಸ್ತು ಶಿಲ್ಪಗಳಲ್ಲಿ ಪ್ರತಿಬಿಂಬಿತವಾಗಿವೆ. ದೇವಾಲಯಗಳು, ಅರಮನೆ ಮತ್ತು ಸಾರ್ವಜನಿಕ ಮಂದಿರಗಳನ್ನೂ ಬಿಟ್ಟು ಉಳಿದ ಮನೆಗಳು ಸಾಮಾನ್ಯವಾದ ಮಣ್ಣಿನ ತಡಿಕೆ ಗೋಡೆಗಳ ಮನೆಗಳಾಗಿದ್ದುವು.

ಧಾರ್ಮಿಕ ಕ್ಷೇತ್ರಗಳಲ್ಲಿ ಆದಿಕಾಲದಿಂದ ಸಂಪೂರ್ಣ ಸಹಾನುಭೂತಿಯಿತ್ತು. ಆದಿಯಲ್ಲಿ ಜೈನ, ಬೌದ್ಧ, ವೈದಿಕ ಮತಗಳೂ ಉತ್ತರಕಾಲದಲ್ಲಿ ಪರದೇಶದಿಂದ ಬಂದ ಕ್ರೈಸ್ತ, ಮಹಮ್ಮದೀಯ ಮತಗಳೂ ಕರ್ಣಾಟಕದಲ್ಲಿ ಸೂಕ್ತ ಆಶ್ರಯವನ್ನು ಪಡೆದು ಸಮನ್ವಯ ದೃಷ್ಟಿಯಿಂದ ಬಾಳಿದುವು. ರಾಜರುಗಳು ತಾವು ಯಾವ ಪಂಥಾನುಯಾಯಿಗಳಾದರೂ ಎಲ್ಲ ಧರ್ಮಗಳಿಗೂ ಸಮಾನವಾಗಿ ಆಶ್ರಯವಿತ್ತು ತಮ್ಮ 'ಚತುಸ್ಸಮಯ ಸಮುದ್ಧರಣ' ಎಂಬ ಬಿರುದನ್ನು ಸಾರ್ಥಕಪಡಿಸಿಕೊಂಡರು. ಹೊಸದಾಗಿ ಬಂದು ಸೇರಿದ ವಿದೇಶೀ ಧರ್ಮಗಳೂ ಇಲ್ಲಿಯ ಸನ್ನಿವೇಶಕ್ಕೆ ಹೊಂದಿಕೊಂಡು ಸಹಬಾಳ್ವೆಗೆ ಹೊಂದಿಕೊಂಡವು.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಹ್ಲಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ 8–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

ವಿದ್ಯಾಭ್ಯಾಸವು ಆವಶ್ಯಕವಾಗಿದ್ದರೂ ಸಾರ್ವಜನಿಕರ ಆಸ್ತಿಯಾಗಿರಲಿಲ್ಲ. ಉಚ್ಚವರ್ಗದವರಿಗೆ ಮಾತ್ರ ಮೀಸಲಾಗಿತ್ತು. ಮಠ, ದೇವಸ್ಥಾನ, ಅಗ್ರಹಾರ, ಬ್ರಹ್ಮಪುರಿಗಳು ವಿದ್ಯಾಭ್ಯಾಸದ ಹೊಣೆಯನ್ನು ಹೊತ್ತಿದ್ದವು, ಅಲ್ಲಿಯೂ ಉಚ್ಚ ಶಿಕ್ಷಣಕ್ಕೇ ಪ್ರಾಧಾನ್ಯವಿದ್ದಿತು, ಪ್ರಾಥಮಿಕ ವಿದ್ಯಾಭ್ಯಾಸಗಳ ಸೌಲಭ್ಯ ಕೆಲವೆಡೆಗಳಲ್ಲಿದ್ದರೂ ಅವುಗಳಿಗೆ ಗೌಣಸ್ಥಾನ. ವಿದ್ಯಾಸಂಸ್ಥೆಗಳು ರಾಜರಾಣಿಯರ ಶ್ರೀಮಂತರ, ವರ್ತಕರ ಕೊಡುಗೈ ದಾನಗಳಿಂದ ನಡೆಯುತ್ತಿದ್ದವು. ಅಲ್ಲಿಯೂ ವೇದ, ಶಾಸ್ತ್ರವೇ ಮೊದಲಾದ ವೈದಿಕ ವಿದ್ಯೆಗಳೇ ಪಠ್ಯ ವಿಷಯಗಳಾಗಿರುತ್ತಿದ್ದವು. ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರತ್ಯೇಕ ಏರ್ಪಾಡಿರಲಿಲ್ಲ. ಆದರಲ್ಲಿಯೂ ಸಾಮಾನ್ಯ ಸ್ತ್ರೀಯರಿಗೆ ವಿದ್ಯಾಭ್ಯಾಸ ಸೌಕರ್ಯವಿದ್ದಂತೆ ಕಾಣುವುದಿಲ್ಲ. ವೃತ್ತಿ ಮತ್ತು ತಾಂತ್ರಿಕ ಶಿಕ್ಷಣಗಳು ವಂಶಪಾರಂಪರ್ಯವಾಗಿ ಪ್ರತ್ಯೇಕ ಮನೆತನಗಳಲ್ಲಿ ಬೆಳೆದು ಬರುತ್ತಿದ್ದವು. ವಿದ್ಯಾಕೇಂದ್ರಗಳಲ್ಲಿ ಗುರುಗಳಿರುವ ಕಡೆ ಶಿಷ್ಯರು ವ್ಯಾಸಂಗಕ್ಕಾಗಿ ಹೋಗಬೇಕಾಗಿತ್ತೇ ವಿನಾ ಸಾರ್ವತ್ರಿಕ ವಿದ್ಯಾಶಾಲೆಗಳಿರಲಿಲ್ಲ. ಸಹ ವಿದ್ಯಾಭ್ಯಾಸವು ಎಲ್ಲಿಯೂ ಇದ್ದಂತೆ ಕಾಣುವುದಿಲ್ಲ.

ಕರ್ಣಾಟಕದಲ್ಲಿ ಉಚ್ಚವರ್ಗದವರೆಲ್ಲ ಶಾಖಾಹಾರಿಗಳು, ಅಕ್ಕಿ ಗೋಧಿ, ರಾಗಿ, ಜೋಳ ಅವರ ಸಾಮಾನ್ಯ ಆಹಾರ. ಇತರರು ಮಾಂಸಾಹಾರಿಗಳಾಗಿರುವುದು ಉಂಟು. ಕುರಿ, ಕೋಳಿ, ಆಡು, ಹಂದಿ, ಜಿಂಕೆ, ವಿಶೇಷವಾದ ಆಹಾರವಾಗಿ ಉಪಯೋಗಿಸಲ್ಪಡುತ್ತಿತ್ತು. ಹಣ್ಣು ಹಂಪಲುಗಳನ್ನೂ ಹಾಲು ಮೊಸರು ತರಕಾರಿಗಳನ್ನೂ ಎಲ್ಲರೂ ಸಾಮಾನ್ಯವಾಗಿ ಉಪಯೋಗಿಸುತ್ತಿದ್ದರು. ಈರುಳ್ಳಿಯನ್ನು ಸರ್ವರೂ ತ್ಯಾಜ್ಯಮಾಡಿದ್ದರು. ಕಡಲ ತೀರದಲ್ಲಿ ಮತ್ಸ್ಯಾಹಾರಿಗಳು ವಿಶೇಷ. ಎಲ್ಲ ವಿಧದ ಅಡುಗೆಯಲ್ಲಿಯೂ ಕನ್ನಡಿಗರು ಬಹಳ ಚತುರರು. ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಉತ್ತಮ ಭೋಜನದ ವಿವರಗಳು ಸಿಕ್ಕುತ್ತವೆ.

ಜನರಲ್ಲಿ ವ್ಯವಸಾಯವೇ ಪ್ರಧಾನವಾದ ಉದ್ಯೋಗ, ಅದಕ್ಕೆ ಸಂಬಂಧಪಟ್ಟ ಸಹಾಯಕೋದ್ಯೋಗಗಳು ಹಳ್ಳಿಗಳಲ್ಲಿ ಪರಂಪರೆಯಾಗಿ ಆಯಾ ಕುಟುಂಬಗಳಲ್ಲಿ ಬೆಳೆದು ಬಂದು ಪರಸ್ಪರ ಸಹಾನುಭೂತಿಯಿಂದ ಸಾಮಾಜಿಕ ಸಮತೆಯಿಂದ ಹಳ್ಳಿಯು ಸ್ವಯಂ ಪೂರ್ಣವಾಗಿ ವ್ಯವಹರಿಸಲು ಸಹಾಯವಾಗಿತ್ತು.

ಒಟ್ಟಿನಲ್ಲಿ ಕರ್ಣಾಟಕದ ಜನಜೀವನವು ಧರ್ಮದ ಅಡಿಗಲ್ಲಿನ ಮೇಲೆ ಸಿದ್ಧವಾಗಿ ನನ್ನಿ, ಚಾಗ, ಅಣ್ಮು, ದಾನ, ದಯಾ, ಸಹಾನುಭೂತಿಗಳು ಹಾಸು ಹೊಕ್ಕಾಗಿ ಕೂಡಿಕೊಂಡು ಶಾಂತಿ ಜೀವನಕ್ಕೆ ಬಹುಮಟ್ಟಿಗೆ ಸಹಾಯಕವಾಗಿತ್ತು.

★

(4 ನೇ ಪುಟದಿಂದ)

ಮೇ 23 ರ ಬೆಳಗ್ಗೆ ತಿ. ತಿ. ದೇ. ಪರಿಪಾಲನಾ ಭವನದಿಂದ ತಾಳ್ಳಪಾಕ ಅನ್ನಮಾಚಾರ್ಯರ ಪ್ರತಿಮೆಯನ್ನು ಮೆರವಣಿಗೆಯಲ್ಲಿ ಸಮೂಹಗಾಯನದಲ್ಲಿ ಅನ್ನಮಾಚಾರ್ಯ ಕಲಾಮಂದಿರಕ್ಕೆ ತರಲಾಯಿತು. ಸಂಜೆ ಬಯಲು ರಂಗಮಂಟಪದಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾವ್ ಅವರು ಉತ್ಸವವನ್ನು ಆರಂಭಿಸಿದರು. ಈ ಸಭೆಯ ಅಧ್ಯಕ್ಷತೆಯನ್ನು ಆಂಧ್ರಪ್ರದೇಶದ ದೇವಾದಾಯ ಇಲಾಖಾ ಸಚಿವ ಶ್ರೀ ಎಸ್. ಯತಿರಾಜಾರಾಯರು ವಹಿಸಿದ್ದು, ಮಧ್ಯಪ್ರದೇಶದ ರಾಜಮಾತಾ ಶ್ರೀಮತಿ ವಿಜಯರಾಜೇ ಸಿಂಧಿಯಾ ಅವರು ಮುಖ್ಯ ಅತಿಥಿಯಾಗಿ ಆಗಮಿಸಿದ್ದರು.



ತಿ. ತಿ. ದೇ. ಕ್ಯಾಸೆಟ್‌ಗಳನ್ನು ಬಿಡುಗಡೆ ಮಾಡುತ್ತ ರಾಜಮಾತಾ ಶ್ರೀಮತಿ ವಿಜಯರಾಜೇಸಿಂಧಿಯಾ

ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರಿಂದ ಸ್ವಾಗತ, ಅನ್ನಮಾಚಾರ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಗಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ ಅವರ ವರದಿಯನಂತರ, ಶ್ರೀ ಎಸ್. ಯತಿರಾಜಾರಾಯರು ಮಾತನಾಡುತ್ತ ಅನ್ನಮಾಚಾರ್ಯ ಜಯಂತಿಯನ್ನು ಇಡೀ ಭರತವರ್ಷದಲ್ಲಿ ಆಚರಿಸುವಂತೆ ಆಗಬೇಕು ಎಂದು ಹಾರೈಸಿದರು. ಲೋಕಸಭಾ ಸದಸ್ಯ ಶ್ರೀ ಪಿ. ಉಪೇಂದ್ರ ಅವರು ಮಾತನಾಡುತ್ತ ಉತ್ತರಭಾರತದಲ್ಲಿ ತಾನಸೇನ ಜಯಂತಿ ನಡೆಯುವಂತೆಯೇ ಅನ್ನಮಾಚಾರ್ಯ ಜಯಂತಿಯೂ ದೊಡ್ಡ ಪ್ರಮಾಣದಲ್ಲಿ ನಡೆಯಬೇಕು ಎಂದರು. ಮುಖ್ಯ ಅತಿಥಿಯಾಗಿ ಉತ್ಸವಗಳಲ್ಲಿ ಭಾಗವಹಿಸಿದ ರಾಜಮಾತಾ ಅವರು ಹಿಂದಿಯಲ್ಲಿ ಮಾತನಾಡುತ್ತ ಭಾಷೆ ಬೇರೆಯಾದರೂ ಭಾವವೊಂದೇ ವೇಷ ಬೇರೆಯಾದರೂ ಸಂಸ್ಕೃತಿಯೊಂದೇ ಎಂಬುದೇ ಭಾರತೀಯತೆಯ ಅಂತಃಸೂತ್ರವೆನ್ನುತ್ತ, ಅನ್ನಮಾಚಾರ್ಯರ ಕೊಡುಗೆಯನ್ನು ಸರ್ವರಿಗೂ ಹಂಚುವಲ್ಲಿ ತಿ. ತಿ. ದೇ. ಗಳು ನೆರವಾಗಬೇಕು ಎಂದರು. ಅವರ ಭಾಷಣವನ್ನು ತೆಲುಗಿಗೂ ಅನುವಾದ ಮಾಡಲಾಯಿತು.

ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ಮಾತನಾಡುತ್ತ ಎಷ್ಟೋ ಮಹನೀಯರ ಜಯಂತಿ ವರ್ಧಂತಿಗಳನ್ನು ಮಾಡುವುದರ ಮೂಲ ಉದ್ದೇಶ-ಅವರುಗಳ ಅಮರ ಸಂದೇಶವನ್ನು ಮನಕ್ಕೆ ತಂದುಕೊಂಡು ಸ್ವಾಮಾಜಿಕವಾಗಿ ಅಭಿವೃದ್ಧಿ ಹೊಂದುವುದೇ ಆಗಿದೆಯೆಂದೂ, ಪುರಂದರದಾಸ, ಅನ್ನಮಾಚಾರ್ಯ, ಮೊದಲಾದವರ ಉಪದೇಶ ಧಾರೆಗೆ ಮನವನ್ನೂ ಜೀವನವನ್ನೂ ಒಡ್ಡಿ ಕೊಳ್ಳಬೇಕಾದ ಆಗತ್ಯವಿದೆಯೆಂದೂ ಹೇಳಿದರು.



ತಿ. ತಿ. ದೇ. ಧಾರ್ಮಿಕಕೃತಿಗಳನ್ನು ಬಿಡುಗಡೆ ಮಾಡುತ್ತ ಶ್ರೀ ಎನ್. ಟಿ. ರಾಮರಾವ್.

ರಾಜಮಾತಾ ಶ್ರೀಮತಿ ವಿಜಯರಾಜೇ ಸಿಂಧಿಯಾ ಅವರು ಉತ್ಸವಗಳ ಸಂದರ್ಭದಲ್ಲಿ ತಿ. ತಿ. ದೇ. ಹೊರತಂದ ಭಕ್ತಿಗೀತೆಗಳ ಕ್ಯಾಸೆಟ್‌ಗಳನ್ನೂ, ಶ್ರೀ ಎನ್. ಟಿ. ರಾಮರಾಯರು ಧಾರ್ಮಿಕ ಗ್ರಂಥಗಳನ್ನೂ ಬಿಡುಗಡೆ ಮಾಡಿದರು. ತಿ. ತಿ. ದೇ. ರಕ್ಷಣಾಧಿಕಾರಿ ಶ್ರೀ ಕೃಷ್ಣಮೂರ್ತಿ ಅವರು ವಂದನಾರ್ಪಣೆ ಮಾಡಿದರು.

ನಂತರ ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರಿಂದ 'ಹರಿಯವತಾರವು' ಶ್ರವ್ಯ ಸಂಗೀತ ರೂಪಕವೂ, ಶ್ರೀ ನೇದನೂರಿ ಕೃಷ್ಣಮೂರ್ತಿ ಅವರಿಂದ ಅನ್ನಮಾಚಾರ್ಯ ಕೃತಿಗಳ ಗಾಯನ ಕಚೇರಿಯೂ ನಡೆಯಿತು.

ಮೇ 24 ರ ಬೆಳಗ್ಗೆ ಅನ್ನಮಾಚಾರ್ಯ ಕಲಾಮಂದಿರದಲ್ಲಿ ನಡೆದ ಉಪನ್ಯಾಸ ಸಭೆಯಲ್ಲಿ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿ ಶ್ರೀ ಎಂ. ವಿ. ರಾಮಶರ್ಮರ ಅಧ್ಯಕ್ಷತೆಯಲ್ಲಿ ಡಾ॥ ವೇಟೂರಿ ಆನಂದ ಮೂರ್ತಿಯವರು ಅನ್ನಮಾಚಾರ್ಯರ ಕೃತಿಗಳ ವೈಶಿಷ್ಟ್ಯವನ್ನು ಕುರಿತೂ, ಶ್ರೀಮತಿ ಸುಗಂಧಾರಾಮನ್ ಅವರು ಅನ್ನಮಾಚಾರ್ಯ, ಪುರಂದರದಾಸ, ಆಳ್ವಾರುಗಳ ಕೃತಿಗಳ ತುಲನಾತ್ಮಕ ವಿವರಣೆಯನ್ನೂ ನೀಡಿದರು. ಅಂದು ಸಂಜೆ ಬಯಲು ರಂಗ ಮಂಟಪದಲ್ಲಿ ಶ್ರೀಮತಿ ಮಣಿಕೃಷ್ಣಸ್ವಾಮಿ ಅವರ ಹಾಗೂ









ಶ್ರೀ ನೂಕಲ ಚಿನ ಸತ್ಯನಾರಾಯಣ ಅವರುಗಳ ಸಂಗೀತ ಕಚೇರಿಗಳು ನಡೆದವು.

ಮೇ 25 ರ ಬೆಳಗ್ಗೆ ಶ್ರೀ ಎಂ. ಬಲರಾಮಿರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಶ್ರೀ ಪಿ. ಕೆ. ರಾಜಗೋಪಾಲಯ್ಯರ್ ಅವರು ಸಂಗೀತದ ಮೂಲ–ವೇದಗಳು ಎಂಬ ವಿಷಯದಲ್ಲಿ ಪಂಡಿತ ಪಾಮರ ರಂಜಕವಾಗಿ ಬೋಧಕವಾಗಿ ಮಾತನಾಡಿದರು. ಅಂದು ಸಂಜೆ ಬಯಲುರಂಗಮಂಟಪದಲ್ಲಿ ಶ್ರೀ ಭೀಮಸೇನ ಜೋಷಿ ಅವರು ರಸಿಕ ರಂಜನೀಯ ಸಂಗೀತವನ್ನು ನೀಡಿದರು.

ಮೇ 26ರ ಬೆಳಗ್ಗೆ ಕಾವಲಿಯ ಶ್ರೀ ಎಸ್.ವಿ. ಭುಜಂಗರಾಯಶರ್ಮ ಅವರ ಅಧ್ಯಕ್ಷತೆಯಲ್ಲಿ ಡಾ॥ ಅಬ್ಬೂರಿ ಗೋಪಾಲಕೃಷ್ಣ ಅವರು ಅನ್ನಮಾಚಾರ್ಯರ ಯಕ್ಷಗಾನ ಕೃತಿಗಳಬಗ್ಗೆ ತೌಲನಿಕವಾಗಿ ಮಾತನಾಡಿದರು. ಡಾ॥ ಸೀತಾ ಅವರು ಒಂದೇ ರಾಗವನ್ನು ವಿವಿಧ ವಾಗ್ಗೇಯ ಕಾರರು ಹೇಗೆ ನಿರ್ವಹಿಸಿದ್ದಾರೆಂಬುದನ್ನು ಹಾಡಿ ವಿವರಿಸಿದರು. ಅಂದು ಸಂಜೆ ಬಯಲುರಂಗ ಮಂಟಪದಲ್ಲಿ ದೆಹಲಿಯ ಮಿಶ್ರಾಸೋದರರ ಸಂಗೀತ ಕಚೇರಿ ನಡೆದು, ನಂತರ ಸಿಕ್ಕಿಲ್ ಸೋದರಿಯರ ಕೊಳಲಿನ ವಾದನ ಉಲ್ಲಾಸಕಾರಿಯಾಗಿದ್ದಿತು.

ಮೇ 27 ರಂದು ಆಂಧ್ರಜ್ಯೋತಿ ಪತ್ರಿಕೆಯ ಸಂಪಾದಕ ಶ್ರೀ ಪುರಾಣಂ ಸುಬ್ರಹ್ಮಣ್ಯ ಶರ್ಮ ಅವರ ಅಧ್ಯಕ್ಷತೆಯಲ್ಲಿ ಶ್ರೀ ಯಲ್ಲಂರಾಜು ಶ್ರೀನಿವಾಸರಾಯರು ಅನ್ನಮಯ್ಯನ ಶೃಂಗಾರ ತತ್ತ್ವದ ಬಗ್ಗೆ ಮಾತನಾಡಿದರು. ನಂತರ ಶ್ರೀಮತಿ ಪದ್ಮಾಮೂರ್ತಿ ಅವರು ಪುರಂದರದಾಸರು ತ್ಯಾಗರಾಜರ ಆದರ್ಶವೆಂದು ವಿವರಿಸಿದರು. ಅಂದು ಸಂಜೆ ಬಯಲು ರಂಗಮಂಟಪದಲ್ಲಿ ಪುದುಕೋಟೆಯ ಶ್ರೀ ಆರ್. ಕೃಷ್ಣ ಮೂರ್ತಿ ಅವರ ವೀಣೆ ಹಾಗೂ ಶ್ರೀ ಆರ್. ರಾಮನಾಥನ್ ಅವರ ವಯೋಲಿನ್ ಕಚೇರಿ ನಡೆದು, ನಂತರ ಶ್ರೀ ಟಿ. ವಿ. ಗೋಪಾಲ ಕೃಷ್ಣ ಅವರ ಗಾಯನ ಸಭೆ ನಡೆಯಿತು. ಪದ್ಮಶ್ರೀ ಎಂ. ಎಸ್ ಗೋಪಾಲಕೃಷ್ಣ ಅವರು ಇವರಿಗೆ ವಯೋಲಿನ್ ನುಡಿಸಿದರು.

ಚಿತ್ರಗಳು ಎಡದಿಂದ ಬಲಕ್ಕೆ: ಸರ್ವಶ್ರೀ.

1. ಎಸ್. ಆರ್. ಜಾನಕಿರಾಮನ್, ಪಿ. ಕೆ. ರಾಜಗೋಪಾಲ ಅಯ್ಯರ್, ಎಂ. ಬಲರಾಮಿರೆಡ್ಡಿ.

2. ಡಾ॥ ಅಬ್ಬೂರಿ ಗೋಪಾಲಕೃಷ್ಣ, ಡಾ॥ ಸೀತ, ಎಸ್. ವಿ. ಭುಜಂಗರಾಯಶರ್ಮ.

3. ಪದ್ಮಾ ಮೂರ್ತಿ, ವೈ. ಶ್ರೀನಿವಾಸರಾವ್, ಪುರಾಣಂ ಸುಬ್ರಹ್ಮಣ್ಯಶರ್ಮ.

4. ಡಾ॥ ರಾವುಲ ಸೂರ್ಯನಾರಾಯಣಮೂರ್ತಿ, ಪೊತ್ತೂರಿ ವೆಂಕಟೇಶ್ವರರಾವ್, ಕಾಮಿಶೆಟ್ಟಿ ಶ್ರೀನಿವಾಸುಲು.

ಮೇ 28 ರ ಬೆಳಗ್ಗೆ ಆಂಧ್ರಪ್ರಭ ಸಂಪಾದ ಕರು ಶ್ರೀ ಪೊತ್ತೂರಿ ವೆಂಕಟೇಶ್ವರ ರಾವ್ ಅವರ ಅಧ್ಯಕ್ಷತೆಯಲ್ಲಿ ತಿ.ತಿ.ದೇ. ಪೌರಸಂಬಂಧ ಣಾಧಿಕಾರಿ ಡಾ|| ರಾವುಲ ಸೂರ್ಯ ನಾರಾ ಯಣ ಮೂರ್ತಿ ಅವರು ಸಾಹಿತ್ಯ ಸಂಗೀತ ಪ್ರಸಾರದಲ್ಲಿ ತಿ ತಿ. ದೇ. ಗಳ ಪಾತ್ರವನ್ನು ವಿವ ರಿಸಿದರು. ಅಂದು ಸಂಜೆ ಶ್ರೀ ಅನ್ನವರಪು ರಾಮ ಸ್ವಾಮಿ ಅವರ ವಯೋಲಿನ್ ಕಚೇರಿ ನಡೆದು ನಂತರ ಉಸ್ತಾದ್ ದಿಲ್‌ಷಾದ್‌ಖಾನ್ ಹಾಗೂ ಶ್ರೀಮತಿ ಪರ್ವೀನ್ ಸುಲ್ತಾನ ಅವರ ಯುಗಳ ಬಂಧ ಗಾಯನ ನಡೆಯಿತು.

ಮೇ 29 ರ ಬೆಳಗ್ಗೆ ಶ್ರೀ ಎಂ. ವಿ. ಕೃಷ್ಣ ಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ಶ್ರೀ ಕಾಮಿಶೆಟ್ಟಿ ಯವರು ಅನ್ನಮಯ್ಯ-ಪದಕವಿತಾ ಪಿತಾಮಹ- ಎಂಬ ವಿಷಯದಲ್ಲಿ ಮಾತನಾಡಿದರು. ಶ್ರೀ ಕಲ್ಲೂರಿ ವೀರಭದ್ರಶಾಸ್ತ್ರಿಯವರು ಭದ್ರಾಚಲ ರಾಮ ದಾಸರಕೀರ್ತನೆಗಳ ಬಗ್ಗೆ, ಶ್ರೀ ಆರ್ರಾ ಕೃಷ್ಣ ಮೂರ್ತಿಯವರು ನಾರಾಯಣತೀರ್ಥರ ಬಗ್ಗೆ ಮಾತನಾಡಿದರು. ಅಂದು ಸಂಜೆ ಶ್ರೀ ಜೇಸುದಾಸರ ಹಾಡುಗಾರಿಕೆ, ಶ್ರೀ ಯಲ್ಲಾ ವೆಂಕಟೇಶ್ವರ ರಾಯರ ಮೃದಂಗ ಕಚೇರಿ ನಡೆದವು.

ಮೇ 30 ರಂದು ಬೆಳಗ್ಗೆ ಚಲನ ಚಿತ್ರದರ್ಶಕ ಶ್ರೀ ಕೆ. ವಿಶ್ವನಾಥರ ಅಧ್ಯಕ್ಷತೆಯಲ್ಲಿ ಸಾಹಿತಿ ಶ್ರೀ ರುದ್ರ ಅವರು ಅನ್ನಮಾಚಾರ್ಯ ಕೃತಿಗಳ ಸಾಹಿತ್ಯಕ ವೈಶಿಷ್ಟ್ಯದ ಬಗ್ಗೆ ಮಾತನಾಡಿದರು. ಶ್ರೀ ಎಸ್. ಆರ್. ಜಾನಕಿರಾಮನ್ ಅವರು ಅನ್ನ ಮಾಚಾರ್ಯರು-ಇತರ ವಾಗ್ಗೇಯಕಾರರು ಎಂಬ ಬಗ್ಗೆ ಮಾತನಾಡಿದರು. ಅಂದು ಸಂಜೆ ಶ್ರೀಮತಿ ಮಣಿಜಯರಾಂ ಅವರ ಸಂಗೀತ ಕಚೇರಿಯೂ, ಶ್ರೀಮತಿ ಸರೋಜ, ಲಲಿತ ಅವರುಗಳ ಸಂಗೀತ ಕಚೇರಿಯೂ ನಡೆದವು.

ಮೇ 31 ರಂದು ಬೆಳಗ್ಗೆ ಶ್ರೀ ಪದ್ಮಾವತೀ ಮಹಿಳಾ ವಿಶ್ವ ವಿದ್ಯಾಲಯದ ಉಪಕುಲಪತಿ ಶ್ರೀಮತಿ ವನಜಾ ಅಯ್ಯಂಗಾರ್ ಅವರ ಅಧ್ಯಕ್ಷತೆ ಯಲ್ಲಿ ಶ್ರೀ ಗೌರಿಪೆದ್ದಿ ರಾಮಸುಬ್ಬ ಶರ್ಮ ಅವರು ಅನ್ನಮಯ್ಯನ ಪದಸಂಪತ್ತಿಯನ್ನು ಕುರಿತೂ, ಶ್ರೀ ದ್ವಾರಂ ಭವನಾರಾಯಣರಾಯರು ತ್ಯಾಗರಾಜರ ಪಂಚರತ್ನ ಕೃತಿಗಳ ಬಗ್ಗೆಯೂ ಮಾತನಾಡಿದರು.

ಅಂದು ಸಂಜೆ ಬಯಲು ರಂಗ ಮಂಟಪದಲ್ಲಿ ಉತ್ಸವದ ಸಮಾರೋಪ. ಆಂಧ್ರಪ್ರದೇಶ ಸರ್ಕಾ ರದ ಮುಖ್ಯ ಕಾರ್ಯದರ್ಶಿ ಶ್ರೀ ಶ್ರಾವಣ ಕುಮಾರ್ ಅವರು ಮುಖ್ಯ ಅತಿಥಿಯಾಗಿದ್ದರು. ಕಾರ್ಯನಿರ್ವಹಣಾಧಿಕಾರಿ ಶ್ರೀ ಚಕ್ರಧರ ರಾಯರ ಅಧ್ಯಕ್ಷತೆಯಲ್ಲಿ ಕಾರ್ಯ ನಿರ್ವಹಣಾಧಿ ಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು







ಚಿತ್ರಗಳು – ಎಡದಿಂದ ಬಲಕ್ಕೆ:

1. ಕಾಮಿಶೆಟ್ಟಿ ಶ್ರೀನಿವಾಸುಲು. ಎಂ. ವಿ. ಕೃಷ್ಣಸ್ವಾಮಿ, ಆರ್ರಾಕೃಷ್ಣಮೂರ್ತಿ, ಕಲ್ಲೂರಿ ವೀರಭದ್ರ ಶಾಸ್ತ್ರಿ. 2. ಎಸ್. ಆರ್. ಜಾನಕಿರಾಮನ್, ವಿಶ್ವನಾಥ್ ಆರುದ್ರ. 3. ವನಜಾ ಅಯ್ಯಂಗಾರ್, ಗೌರಿಪೆದ್ದಿ ರಾಮಸುಬ್ಬ ಶರ್ಮ, ದ್ವಾರಂ ಭಾವನಾರಾಯಣ.



ಸಂಗೀತೋತ್ಸವದ ಸಮಾರೋಪ ಸಮಾರಂಭದಲ್ಲಿ
ಸರ್ವಶ್ರೀ ಎಸ್. ಲಕ್ಷ್ಮೀನಾರಾಯಣ, ಶ್ರಾವಣಕುಮಾರ್, ವೈ. ಚಕ್ರಧರರಾವ್, ಕೆ. ಕೃಷ್ಣಮೂರ್ತಿ

ಸ್ವಾಗತ ನುಡಿದರು. ಶ್ರೀ ಶ್ರಾವಣಕುಮಾರರು ಮಾತನಾಡುತ್ತ ಲೋಪದೋಷಗಳನ್ನು ತಿದ್ದಿಕೊಂಡು ಯಾತ್ರಿಕ ಸೇವೆ ಮಾಡುವುದು ಅಗತ್ಯವೆಂದು ಕರೆನೀಡುತ್ತ, ಯಾತ್ರಿಕರೆಲ್ಲರೂ ಅನ್ನಮಾಚಾರ್ಯರ ನೆನಪನ್ನೂ ಕೊಂಡೊಯ್ಯುವಂತೆ ಆಗಬೇಕು ಎಂದು ನುಡಿದರು. ರಕ್ಷಣಾಧಿಕಾರಿ ಶ್ರೀ ಕೆ. ಕೃಷ್ಣಮೂರ್ತಿ ಅವರು ವಂದನಾರ್ಪಣೆ ಮಾಡಿದರು.

ಶ್ರೀಮತಿ ಎಂ. ಎಲ್. ವಸಂತಕುಮಾರಿ ಅವರ ಸಂಗೀತ ಕಚೇರಿ ನಡೆಯಿತು. ಕೊನೆಯ ಹಂತವಾಗಿ ಪಂಡಿತ ಜಸರಾಜ್ ವೃಂದದವರಿಂದ ಗಾಯನ ಸಭೆ ನಡೆದು ಶ್ರೀ ವೆಂಕಟೇಶ್ವರ ಅನ್ನಮಾಚಾರ್ಯ ಸಂಗೀತೋತ್ಸವ ಮುಕ್ತಾಯ ಹೊಂದಿತು.

## ತಿರುಪತಿಯಲ್ಲಿ ವನ ಸಂರಕ್ಷಣೆಗೆ ನಿರ್ಣಯ

ತಿರುಪತಿ–ತಿರುಮಲೆಗಳ ಸಮೀಪದಲ್ಲಿ ಗಿಡಮರಗಳ ಸಂರಕ್ಷಣೆಗಾಗಿ ಮೇ 5 ರಂದು ಮೌನ ಪ್ರದರ್ಶನವೊಂದು ನಡೆಯಿತು. ತಿ. ತಿ. ದೇ. ಗಳ ನೇತೃತ್ವದಲ್ಲಿ ನಡೆದ ಈ ಮೌನ ಮೆರವಣಿಗೆಯಲ್ಲಿ ಚಿಪ್ಕೋ ಆಂದೋಲನದ ನಾಯಕ ಸುಂದರಲಾಲ್ ಬಹುಗುಣ ನಾಯಕತ್ವ ವಹಿಸಿದ್ದರು. ತಿ. ತಿ ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಲಕ್ಷ್ಮೀನಾರಾಯಣ, ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯ ಹಾಗೂ ಶ್ರೀ ಪದ್ಮಾವತೀ ಮಹಿಳಾ ವಿಶ್ವವಿದ್ಯಾಲಯಗಳ ಉಪಕುಲಪತಿಗಳು ಶ್ರೀ ಜಿ ಎನ್ ರೆಡ್ಡಿ ಹಾಗೂ ಶ್ರೀಮತಿ ವನಜ ಅಯ್ಯಂಗಾರ್, ಮತ್ತಿತರ ಹಲವಾರು ಮಂದಿ ಸಿಂಡಿಕೇಟ್ ಸದಸ್ಯರು, ಉಪನ್ಯಾಸಕರು, ವಿದ್ಯಾರ್ಥಿಗಳು ಈ ಮೌನ ಮೆರವಣಿಗೆಯಲ್ಲಿ 'ಮರಗಳನ್ನು ಕಡಿಯಬೇಡಿ' ಎಂಬ ಫಲಕಗಳನ್ನು ಹಿಡಿದು ನಡೆದರು. ನಂತರ ನಡೆದ ಬಹಿರಂಗ ಸಭೆಯಲ್ಲಿ ಮಾತನಾಡುತ್ತ ಶ್ರೀ ಸುಂದರಲಾಲರು ಮರಕಡಿಯುವ ಹವ್ಯಾಸ ಹೋಗಬೇಕೆಂದೂ ಮರಗಳನ್ನು ಪ್ರೀತಿಸುವ ಸಂರಕ್ಷಿಸುವ ಹವ್ಯಾಸ ಬೆಳೆಯಬೇಕೆಂದೂ ಕರೆನೀಡಿದರು. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಮಾತನಾಡುತ್ತ ಪರಿಸರ ಮಾಲಿನ್ಯವನ್ನು ಕಡಮೆಗೊಳಿಸುವ ಈ ಚಿಪ್ಕೋ ಉದ್ಯಮದಲ್ಲಿ ಸರ್ಕಾರದೊಡನೆ ಸಾರ್ವಜನಿಕರೂ ಸಂಘಸಂಸ್ಥೆಗಳೂ ಪಾಲುಗೊಳ್ಳಬೇಕೆಂದೂ ಹೇಳಿದರು.

## ಸಂಗೀತೋತ್ಸವದಲ್ಲಿ ಪ್ರಕಟವಾದ ಭಕ್ತಿಗೀತೆಗಳ ಕ್ಯಾಸೆಟ್‌ಗಳು

ತೆಲುಗು

1. ಅನ್ನಮಯ್ಯ ಮಧುರ ಕವಿತಾಗಾನಂ
   ನಂ–2007–ಸಿ 60
2. ಅನ್ನಮಯ್ಯ ಪದ ಸೌರಭಂ
   ನಂ–2008–ಸಿ 60
3. ಅನ್ನಮಯ್ಯ ಸಂಕೀರ್ತನ ಲಹರಿ
   ನಂ–2009–ಸಿ 60
4. ಅನ್ನಮಯ್ಯ ಸಂಕೀರ್ತನ ವಾಹಿನಿ
   ನಂ–2010–ಸಿ 60
5. ಶ್ರೀ ವೆಂಕಟೇಶ್ವರ ನವರತ್ನ ಕೀರ್ತನಮಾ
   ನಂ–4001–ಸಿ 60

ಕನ್ನಡ

6 ಪುರಂದರದಾಸರು–ಶ್ರೀನಿವಾಸ ಸಂಸ್ತುತಿ
   ಲಲಿತ–ಸರೋಜ ನಂ–3001–ಸಿ 60
7. ಪುರಂದರದಾಸರು–ಶ್ರೀನಿವಾಸವೈಭವ
   ಎಂ. ಎಲ್. ವಸಂತಕುಮಾರಿ
   ಸಂ 3002–ಸಿ 60
8. ಹರಿದಾಸರು ಕಂಡ ಶ್ರೀನಿವಾಸ
   ವಿದ್ಯಾಭೂಷಣ ತೀರ್ಥ ಸ್ವಾಮೀಜೀ
   ನಂ 3003–ಸಿ 60

ತಮಿಳು

9. ಅರಾವಮುದಂ
   ಆರ್. ವೇದವಲ್ಲಿ. ನಂ 4002 ಸಿ 60
10. ಪೆರಿಯ ತಿರುಮೊಳಿ
   ವಿ. ರಾಜಕುಮಾರ್ ಭಾರತಿ
   ನಂ 4003–ಸಿ 60
11. ಪಣ್ಣ ಪಾವಮಾಲೈ
   ವಾಣಿಜಯರಾಂ ನಂ–4004 ಸಿ 60
12. ಶ್ರೀ ವೆಂಕಟೇಶ್ವರ ಸಹಸ್ರನಾಮಂ
   ಸಂಸ್ಕೃತ–ಮ.ಚಿಕ್ಕಣ್ಣಸ್ವಾಮಿ
   ನಂ–1021–ಸಿ 45



ಬಹಿರಂಗ ಸಭೆಯಲ್ಲಿ ಮಾತನಾಡುತ್ತ ಶ್ರೀ ಸುಂದರಲಾಲ್ ಬಹುಗುಣ.



Edited and Published on behalf of the T. T. Devasthanams by K. Subba Rao, M.A., and Printed at
T. T. D. Press by M. Vijayakumar Reddy, Manager, T. T. D. Press, Tirupati - 517501.

